




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Vol. - 14 | March - 2016 | Issue No. 03 | ₹ 10/-




5 ರಿಂದ 29 ಫೆಬ್ರವರಿ 2016ರವರೆಗೆ ರಾಮನಗರ ಜಿಲ್ಲೆಯ ...ಸದ ಲೋಕದಲ್ಲಿ ಹಮ್ಮಿಕೊಳ್ಳಲಾಗಿದ್ದ ರಾಜ್ಯ ಮಟ್ಟದ 38ನೇ ಕಬ್ ಬುಲ್‌ಬುಲ್ ಉತ್ಸವವನ್ನು ಶ್ರೀ ಡಿ.ಕೆ. ಶಿವಕುಮಾರ್, ಮಾನ್ಯ ...ವ ಸಚಿವರು, ಕರ್ನಾಟಕ ಸರ್ಕಾರ ಇವರು ಉದ್ಘಾಟಿಸುತ್ತಿರುವುದು. ...ಕರಹಳ್ಳಿ ಅಂಧರ ಶಾಲೆಯ ಶ್ರೀಶ್ರೀಶ್ರೀ ಅನ್ನದಾನೇಶ್ವರ ಸ್ವಾಮೀಜಿ, ... ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಹಾಗೂ ...ಪದಾಧಿಕಾರಿಗಳು ಮತ್ತು ಇತರರರನ್ನು ಚಿತ್ರದಲ್ಲಿ ಕಾಣಬಹುದು.



...ಕಬ್-ಬುಲ್‌ಬುಲ್ ಉತ್ಸವದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಶ್ರೀ ಕೆ. ಎಸ್. ಸತ್ಯಮೂರ್ತಿ, ಭಾ.ಆ.ಸೇ, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರೊಂದಿಗೆ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ಸಿ.ಎಂ. ಲಿಂಗಪ್ಪ, ಮಾಜಿ ಶಾಸಕರು, ಶ್ರೀ ಕೆ. ರಾಜು, ಮಾಜಿ ಶಾಸಕರು ಮತ್ತು ರಾಜ್ಯ ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.




...2-2016 ರಂದು ಬೆಂಗಳೂರಿನ ಶಾಂತಿಗೃಹದಲ್ಲಿ, ಈ ಹಿಂದೆ ರಾಜ್ಯ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸಿದ್ದ ದಿ|| ಜೆ.ಬಿ. ಮಲ್ಲಾರಾಧ್ಯರವರ ...ವನ್ನು ಆಚರಿಸಿದ ಸಂದರ್ಭದಲ್ಲಿ ಮಾಜಿ ಕೇಂದ್ರ ಸಚಿವರಾದ ಶ್ರೀ ಎಂ.ವಿ. ರಾಜಶೇಖರನ್, ಹಿರಿಯ ಸಾಹಿತಿ ಹಾಗೂ ಜಾನಪದ ತಜ್ಞ ...ರು. ಚನ್ನಬಸಪ್ಪ, ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ಮಲ್ಲಾರಾಧ್ಯರ ಪುತ್ರ ಶ್ರೀ ಜೆ. ಎಂ. ನಾಗರಾಜ್ ಹಾಗೂ ಕುಟುಂಬ ...ರರನ್ನು ಚಿತ್ರದಲ್ಲಿ ಕಾಣಬಹುದು.



ದಿ. 16 ರಿಂದ 22 ಫೆಬ್ರವರಿ 2016ರವರೆಗೆ ಚಿತ್ರದುರ್ಗ ಶ್ರೀ ಮೇದಾರ ಕೇತೇಶ್ವರ ಮಠ, ಸೀಬಾರ ಇಲ್ಲಿ ಹಮ್ಮಿಕೊಳ್ಳಲಾಗಿದ್ದ ಮೂಲ ತರಬೇತಿಗಳ ಶಿಬಿರವನ್ನು ಶ್ರೀ ಮುರುಘಾ ಮಠದ ಡಾ॥ ಶಿವಮೂರ್ತಿ ಮುರುಘಾಶರಣರು ಸಸಿಗೆ ನೀರು ಹಾಕುವುದರ ಮೂಲಕ ಉದ್ಘಾಟಿಸುತ್ತಿರುವುದು. ತಾಲ್ಲೂಕಾ ಸಂಸ್ಥೆ ಅಧ್ಯಕ್ಷರಾದ ಶ್ರೀ ಡಿ. ಬೋರಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ರವಿಶಂಕರರೆಡ್ಡಿ ಹಾಗೂ ಜಿಲ್ಲಾ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ದಿ. 23-02-2016ರಂದು ಬೀದರ್ ಜಿಲ್ಲೆಯಲ್ಲಿ ನಡೆದ ಜಿಲ್ಲಾ ರ್‍ಯಾಲಿಗೆ ಆಗಮಿಸಿದ ಶ್ರೀ ರೆಹಮಾನ್ ಖಾನ್, ಮಾನ್ಯ ಶಾಸಕರನ್ನು ಹೂಗುಚ್ಛ ನೀಡಿ ಸ್ವಾಗತಿಸುತ್ತಿರುವುದು.



ದಿ. 22-02-2016ರಂದು ವಿಶ್ವ ಸ್ಕೌಟ್ ದಿನ ಹಾಗೂ ಚಿಂತನ ದಿನವನ್ನು ಕೊಡಗಿನಲ್ಲಿ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಆಚರಿಸಿದ ಸಂದರ್ಭದಲ್ಲಿ ಶ್ರೀ ಮೀರ್ ಅನೀಸ್ ಅಹ್ಮದ್, ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ ಇವರು ಮಾತನಾಡುತ್ತಿರುವುದು. ಜಿಲ್ಲಾ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.



ದಿ 17-03-2016 ರಂದು ಹಾವೇರಿಯಲ್ಲಿ ನಡೆದ ಸ್ಕೌಟ್ ಶಿಕ್ಷಕ/ಗೈಡ್ ಶಿಕ್ಷಕಿಯರ ಸಮಾವೇಶದಲ್ಲಿ ಶ್ರೀ ಬಸವರಾಜ ಶಿವಣ್ಣನವರ, ಮಾನ್ಯ ಶಾಸಕರು, ಬ್ಯಾಡಗಿ ಕ್ಷೇತ್ರ ಮಾತನಾಡುತ್ತಿರುವುದು. ಶ್ರೀ ಸಂಜೀವ ನೀರಲಗಿ, ಅಧ್ಯಕ್ಷರು, ನಗರಾಭಿವೃದ್ಧಿ ಪ್ರಾಧಿಕಾರ, ಹಾವೇರಿ, ಶ್ರೀ ಕೆ.ಬಿ. ಅಂಜಿನಪ್ಪ, ಸಿ.ಇ.ಓ, ಜಿಲ್ಲಾ ಪಂಚಾಯತ್, ಹಾವೇರಿ, ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಮತ್ತು ಇತರರನ್ನು ಚಿತ್ರದಲ್ಲಿ ಕಾಣಬಹುದು.



ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಯಡೂರದಲ್ಲಿ ನಡೆದ ಮೂಲ ತರಬೇತಿ ಶಿಬಿರಗಳನ್ನು ಮಾನ್ಯ ಶಾಸಕ ಶ್ರೀ ಗಣೇಶ ಪ್ರಕಾಶ ಹುಕ್ಕೇರಿ ಅವರು ಉದ್ಘಾಟಿಸಿ ಮಾತನಾಡುತ್ತಿರುವುದು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತ, ಶ್ರೀ ಜಿ.ಬಿ. ಮನ್ನಿಕೇರಿ, ಉಪನಿರ್ದೇಶಕ, ಸಾ.ಶಿ.ಇ. ಮತ್ತು ಇತರರನ್ನು ಚಿತ್ರದಲ್ಲಿ ಕಾಣಬಹುದು.



ಉಡುಪಿಯಲ್ಲಿ ನಡೆದ ಜಿಲ್ಲಾ ಮಟ್ಟದ ಕಬ್ಸ್-ಬುಲ್‌ಬುಲ್ಸ್ ಉತ್ಸವವನ್ನು ಶ್ರೀ ಜಿತೇಂದ್ರ ಕುಮಾರ್, ಸಮಾಜ ಸೇವಕರು, ಉದ್ಯಾವರ ಉದ್ಘಾಟಿಸುತ್ತಿರುವುದು. ಜಿಲ್ಲಾ ಮುಖ್ಯ ಆಯಕ್ತ ಶ್ರೀ ಕೆ.ಬಿ. ರಾವ್ ಹಾಗೂ ಇತರ ಜಿಲ್ಲಾ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.

# ಕರ್ನಾಟಕ ಸ್ಕೌಟ್ ಮತ್ತು ಗೈಡ್
ಮಾಸಿಕ ವಾರ್ತಾಪತ್ರಿಕೆ

# Karnataka Scout & Guide
Monthly News Magazine

Monthly Published by
**The Bharat Scouts & Guides, Karnataka**
State Headquarters, Shanthigruha
# 39, Palace Road, Bengaluru-560 001
Tel : 080-2226 0017, 2226 7470




**ಪರಿವಿಡಿ**




**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**
**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/- ಚಂದಾಹಣವನ್ನು**
**ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ**
**ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39, ಅರಮನೆ ರಸ್ತೆ, ಬೆಂಗಳೂರು-560 001**
**ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.**

ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ
**www.bsgkarnataka.org | www.kondajjibasappa.org | www.kondajjibasappa.com**

# ರಾಜ್ಯ ಮುಖ್ಯ ಆಯುಕ್ತರ ನುಡಿ



ಪ್ರಿಯ ಓದುಗ ಮಿತ್ರರೆ,

ವಿದ್ಯಾರ್ಥಿಗಳಿಗೆ ಈಗ ಪರೀಕ್ಷಾಸಮಯ. ಇಡೀ ವರ್ಷ ಓದಿರುತ್ತೀರಿ. ಮುಂದಿನ ತರಗತಿಗೆ ಹೋಗಬೇಕಾದರೆ ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕು. ಇದು ಒಂದು ರೀತಿಯ ಸವಾಲು ಆದರೆ ವರ್ಷದುದ್ದಕ್ಕೂ ಓದಿನ ಕಡೆಗೂ ಲಕ್ಷ್ಯವಿಟ್ಟದ್ದ ನಿಮಗೆ ಈ ಸವಾಲು ಕಠಿಣವಲ್ಲ. ನಿಮಗೆಲ್ಲರಿಗೂ ಬರಲಿರುವ ಪರೀಕ್ಷಯಲ್ಲಿ ಯಶಸ್ಸು ದೊರೆಯಲಿ ಎಂದು ಹಾರೈಸುತ್ತೇನೆ.

ಬೇಸಿಗೆಯ ರಜಾ ಕಾಲವನ್ನು ಉಪಯುಕ್ತವಾಗಿ ಬಳಸಿ. ವಿವಿಧ ಬೇಸಿಗೆ ಶಿಬಿರಗಳು ವ್ಯಕ್ತಿವಿಕಸನ ಚಟುವಟಿಕಯನ್ನು ಹಮ್ಮಿಕೊಂಡಿರುತ್ತವೆ. ಅದರಲ್ಲಿ ಭಾಗವಹಿಸಿ ಪೋಷಕರೊಂದಿಗೆ ಪ್ರವಾಸ ಹೋಗಿಬನ್ನಿ. ಪ್ರವಾಸಗಳು ನಿಮ್ಮ ಜೀವನಾನುಭವವನ್ನು ಹೆಚ್ಚಿಸುತ್ತದೆ. ವಾಸ್ತುಶಿಲ್ಪ ವನಸೌಂದರ್ಯ ನಿಮ್ಮ ಮನವನ್ನು ಮುದಗೊಳಿಸುತ್ತದೆ. ಸಾದ್ಯವಾದರೆ, ಗೆಳೆಯರೊಂದಿಗೆ ಕೂಡಿ ಸಾಮಾಜಿಕ ಸೇವಾ ಕಾರ್ಯಕ್ರಮಗಳನ್ನು ಯೋಜಿಸಿರಿ. ಸಮಾಜದಲ್ಲಿ ತೊಂದರೆಗೆ ಒಳಗಾದವರಿಗೆ ಸಹಾಯಮಾಡಿ. ಅದನ್ನೇ "ಬೇಡನ್ ಪಾವೆಲ್" ಅವರು "Be Prepared" ಎಂದಿರುವುದು. ಬೇಸಿಗೆಯ ಈ ದಿನಗಳಲ್ಲಿ ನಿಮ್ಮ ಆರೋಗ್ಯದ ಕಡೆಗೆ ಹೆಚ್ಚಿನ ಗಮನ ನೀಡಿರಿ.

ಕರ್ನಾಟಕ ಸರ್ಕಾರ ಹೊಸವರ್ಷದ ಬಜೆಟ್‌ನ್ನು ಮಂಡಿಸಿದೆ. ಅಭಿವೃದ್ಧಿ ಪರವಾದ ಬಜೆಟ್ ದೀರ್ಘಕಾಲೀನ ರಚನಾತ್ಮಕ ಕಾರ್ಯಸೂಚಿಯನ್ನು ಅನಾವರಣಗೊಳಿಸಿದೆ ಉತ್ತಮ ಬಜೆಟ್‌ಗಾಗಿ ಸನ್ಮಾನ್ಯ ಮುಖ್ಯಮಂತ್ರಿ ಶ್ರೀ.ಸಿದ್ದರಾಮಯ್ಯನವರನ್ನು ನಾನು ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ಎಂದಿನಂತೆ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಸರ್ಕಾರ ಅನುದಾನವನ್ನು ಬಿಡುಗಡೆ ಮಾಡಿದೆ. ವಿಶೇಷವಾಗಿ ಹದಿನೇಳನೆಯ ರಾಷ್ಟ್ರೀಯ ಜಾಂಬೂರಿಗಾಗಿ ಹೆಚ್ಚಿನ ಅನುದಾನವನ್ನು ಒದಗಿಸಿದೆ. ಆದುದರಿಂದ ಕರ್ನಾಟಕದಲ್ಲಿ ಜಾಂಬೂರಿ ನಡೆಸುವ ನಮ್ಮ ಬಹುದಿನಗಳ ಕನಸು ನನಸಾಗಲಿದೆ. ಆರ್ಥಿಕ ನೆರವನ್ನು ನೀಡಿರುವ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಅಧ್ಯಕ್ಷರೂ ಆದ ಸನ್ಮಾನ್ಯ ಮುಖ್ಯಮಂತ್ರಿಯವರಿಗೆ ನಮ್ಮ ಸಂಸ್ಥೆ ಆಭಾರಮನ್ನಣೆಯನ್ನು ಸಲ್ಲಿಸುತ್ತದೆ. ಸ್ಕೌಟ್ಸ್ ಮತ್ತು ಗೈಡ್ಸ್ ಆರಂಭವಾದಾಗಿನಿಂದ ಇಲ್ಲಿಯವರೆಗೆ 15 ರಾಷ್ಟ್ರೀಯ ಮತ್ತು ಮೂರು ವಿಶೇಷ ಜಾಂಬೂರಿಗಳು ನಡೆದಿವೆ. ಮೊದಲ ರಾಷ್ಟ್ರೀಯ ಜಾಂಬೂರಿಯು 1953–54ರಲ್ಲಿ ಹೈದ್ರಾಬಾದಿನಲ್ಲಿ ಜರುಗಿತು. ಡಿಸೆಂಬರ್ 2016ರಲ್ಲಿ ಮೈಸೂರಿನಲ್ಲಿ ಆಯೋಜಿಸಿರುವ 17ನೇ ರಾಷ್ಟ್ರೀಯ ಜಾಂಬೂರಿಯು ಕರ್ನಾಟಕದಲ್ಲಿ ಮೂರನೆಯದು. 1960ರಲ್ಲಿ 3ನೇ ರಾಷ್ಟ್ರೀಯ ಜಾಂಬೂರಿ, ಮತ್ತು 1986ರಲ್ಲಿ ಹತ್ತನೆಯ ರಾಷ್ಟ್ರೀಯ ಜಾಂಬೂರಿ ಬೆಂಗಳೂರಿನ ಅರಮನೆ ಮೈದಾನದಲ್ಲಿ ನಡೆದಿತ್ತು. ಇದೀಗ ಕರ್ನಾಟಕದಲ್ಲಿ ಮೂರನೆಯ ಬಾರಿಗೆ ಜಾಂಬೂರಿಯನ್ನು ನಡೆಸುವ ಸುಯೋಗ ಒದಗಿದೆ ವಿವಿಧ ರಾಜ್ಯಗಳಿಂದ ಸುಮಾರು ಮೂವತ್ತು ಸಾವಿರಕ್ಕೂ ಅಧಿಕ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಬರುವ ನಿರೀಕ್ಷೆಯಿದೆ. ಅಲ್ಲದೆ ವಿದೇಶಗಳಿಂದಲೂ ಪ್ರತಿನಿಧಿಗಳು, ಅತಿಥಿ ತಂಡಗಳು ಬರುತ್ತವೆ. ರಾಷ್ಟ್ರದ, ರಾಜ್ಯದ ಹಿರಿಯ ಸ್ಕೌಟರ್‌ಗಳೂ, ನಾಯಕರೂ ಭಾಗವಹಿಸುತ್ತಾರೆ. ಸತತ ಏಳುದಿನಗಳ ಕಾಲ ವಿವಿಧರೀತಿಯ ವ್ಯಕ್ತಿ ವಿಕಸನ, ನಾಯಕತ್ವ ತರಬೇತಿ ಕಾರ್ಯಕ್ರಮಗಳು, ವಿವಿಧ ಸ್ಪರ್ಧೆಗಳು, ಮನೋರಂಜನಾ ಚಟುವಟಿಕೆಗಳು ಆಯೋಜಿತವಾಗಿರುತ್ತದೆ. ಈ ಎಲ್ಲಾ ಕಾರ್ಯಕ್ರಮಗಳನ್ನು ಕ್ಷಮತೆಯಿಂದ ನಾವು ನಿಭಾಯಿಸಬೇಕು ನಾನು ಹಿಂದಿನ ಸಂಚಿಕೆಗಳಲ್ಲಿ ತಿಳಿಸಿದಂತೆ ನಮ್ಮ ಸಮಸ್ತ ಮಾನವ ಸಂಪನ್ಮೂಲವನ್ನು ಯೋಜನಾಬದ್ಧವಾಗಿ ಬಳಸಿಕೊಂಡು ಯಶಸ್ಸನ್ನು ಗಳಿಸಬೇಕಿದೆ.

ವಿಶ್ವಸಂಸ್ಥೆಯ ಘೋಷಣೆಯಂತೆ ಪ್ರತಿವರ್ಷ ಮಾರ್ಚ್ 8ನೇ ತಾರೀಖು, ಅಂತಾರಾಷ್ಟ್ರೀಯ ಮಹಿಳಾದಿನ ಜನ ಜೀವನದಲ್ಲಿ, ಕುಟುಂಬದಲ್ಲಿ ಅತ್ಯುತ್ತಮ ಕಾಣಿಕೆಯನ್ನು ನೀಡುತ್ತಿರುವ ಮಹಿಳೆಯ ಸಬಲೀಕರಣವನ್ನು ಸಂಭ್ರಮದಿಂದ ಆಚರಿಸಿ, ಸ್ತ್ರೀಯರು ಎಲ್ಲಾ ರಂಗದಲ್ಲಿ ಮುಂದುರೆಯುವಂತೆ ಮಾಡಲು ತೆಗದುಕೊಳ್ಳಬೇಕಾದ ಕ್ರಮಗಳ ಬಗ್ಗೆ ಚಿಂತಿಸುವ ದಿನ. ಸ್ಕೌಟ್ಸ್ ಮತ್ತು ಗೈಡ್ಸ್ ಚಳುವಳಿಯಲ್ಲಿ ಹೆಣ್ಣುಮಕ್ಕಳಿಗೆ, ಸಮಾನ ಅವಕಾಶಗಳನ್ನು ಕಲ್ಪಿಸಲಾಗಿದೆ. 1909ರಲ್ಲಿ ಲಂಡನ್ನಿನಲ್ಲಿ ಜರುಗಿದ ಪ್ರಥಮ ಸ್ಕೌಟ್ಸ್ ಜಾಂಬೂರಿಯಲ್ಲಿ ಬೇಡನ್ ಪಾವೆಲ್ಲರು ಅನಿರೀಕ್ಷಿತವಾಗಿ ಭಾಗವಹಿಸಿದ ಹತ್ತು ಹೆಣ್ಣುಮಕ್ಕಳನ್ನು ಗಮನಿಸುತ್ತಾರೆ.ಅವರೂ ಸಮವಸ್ತ್ರವನ್ನು ಧರಿಸಿ ಬಂದಿದ್ದರು. ಆಶ್ಚರ್ಯಭರಿತರಾದ ಬಿ.ಪಿಅವರು ಹೆಣ್ಣುಮಕ್ಕಳಿಗಾಗಿ ಸ್ಕೌಟಿಂಗ್ ಆರಂಭಮಾಡುವ ತೀರ್ಮಾನ ಮಾಡುತ್ತಾರೆ 'ಗೈಡ್ಸ್' ಅನ್ನುವ ನಾಮಕರಣವು ಭಾರತದಲ್ಲಿ ಆಗಿದ್ದು ಎನ್ನಲಾಗಿದೆ, ಗಂಡು ಮಕ್ಕಳಿಗೆ ಸಮಾನವಾಗಿ ಹೆಣ್ಣು ಮಕ್ಕಳಿಗೆ ಅವಕಾಶ. ಅವರ ಸರ್ವತೋಮುಖವಾದ ಅಭಿವೃದ್ಧಿಯು ಗೈಡ್ಸ್‌ನ ಮುಖ್ಯ ಉದ್ದೇಶವಾಗಿದೆ ಮಾರ್ಚ್ 9ರಂದು ನಿಧನರಾದ ಶ್ರೀಮತಿ ಓಕ್ಟೇವಿಯ ಅಲ್ಬುಕರ್ಕ್, ಕರ್ನಾಟಕದವರು. ರಾಷ್ಟ್ರಮಟ್ಟದಲ್ಲಿ ಮುಖ್ಯ ಗೈಡ್‌ಆಯುಕ್ತರಾಗಿ ಸೇವೆ ಸಲ್ಲಿಸಿದ್ದಾರೆ. ಅವರ ನೆನಪು ನಮಗೆಲ್ಲರಿಗೂ ಸ್ಫೂರ್ತಿದಾಯಕ.

ಈ ತಿಂಗಳಲ್ಲಿ ನಾನು ರಾಜ್ಯಾದ್ಯಂತ ಪ್ರವಾಸ ಮಾಡಿ ರಾಜ್ಯ ಸಂಸ್ಥೆ ಹಾಗು ಜಿಲ್ಲಾ ಸಂಸ್ಥೆಗಳು ಏರ್ಪಡಿಸಿದ ಸ್ಕೌಟಿಂಗ್-ಗೈಡಿಂಗ್‌ನ ಅನೇಕ ಶಿಬಿರಗಳು ಹಾಗೂ ಕಾರ್ಯಕ್ರಮಗಳಲ್ಲಿ ಭಾಗವಹಿಸಿರುತ್ತೇನೆ.

ಯಾದಗಿರಿ ಜಿಲ್ಲೆಯ ಸುರುಪುರದಲ್ಲಿ ನಡೆದ ಮೂಲ ತರಬೇತಿ ಶಿಬಿರಗಳಲ್ಲಿ ಭಾಗವಹಿಸಿ ಶಿಬಿರಾರ್ಥಿಗಳೊಂದಿಗೆ ಸಂವಾದ ನಡೆಸಿದ್ದೇನೆ. ಹಾಗೆಯೇ ಹಾವೇರಿಯಲ್ಲಿ ಹಮ್ಮಿಕೊಳ್ಳಲಾಗಿದ್ದ ಜಿಲ್ಲಾಮಟ್ಟದ ಸ್ಕೌಟ್‌ಶಿಕ್ಷಕ/ಗೈಡ್‌ಶಿಕ್ಷಕಿಯರ ಸಮಾವೇಶದಲ್ಲಿ ಮಾನ್ಯ ಶಾಸಕರುಗಳಾದ ಶ್ರೀ.ರುದ್ರಪ್ಪ ಲಮಾಣಿ ಹಾಗೂ ಶ್ರೀ.ಬಸವರಾಜ್ ಶಿವಣ್ಣನವರ ಅವರುಗಳೊಂದಿಗೆ ನಾನು ಪಾಲ್ಗೊಂಡಿದ್ದೆ, ಹಾಸನದ ಸರ್ಕಾರಿ ಕಲಾ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಗಿದ್ದ, ರೋವರ್ ಮತ್ತು ರೇಂಜರ್ಸ್ ಲೀಡರ್‌ಗಳ ಪುನಶ್ಚೇತನ ತರಬೇತಿಯಲ್ಲಿ ಹಾಸನ ಜಿಲ್ಲೆಯ ಕಾಲೇಜಿನ ಉಪನ್ಯಾಸಕರು, ಪ್ರಾಧ್ಯಾಪಕರು ಉತ್ಸಾಹದಿಂದ ಭಾಗವಹಿಸಿದ್ದರು. ರೋವರಿಂಗ್ ಮತ್ತು ರೇಂಜರಿಂಗ್ ಕಾರ್ಯಕ್ರಮವು ಕರ್ನಾಟಕದಲ್ಲಿ ಪ್ರಗತಿಯತ್ತ ಸಾಗುತ್ತಿರುವುದು ಸಂತೋಷದ ವಿಷಯ ಇದಕ್ಕೆ ಸಂಬಂಧಪಟ್ಟಂತೆ ಕೋಲಾರದ ಚಿಕ್ಕತಿರುಪತಿಯಲ್ಲಿ ಹಮ್ಮಿಕೊಳ್ಳಲಾಗಿದ್ದ ರಾಜ್ಯಮಟ್ಟದ ರೋವರ್ ರೇಂಜರ್ ಸಮುದಾಯ ಅಭಿವೃದ್ಧಿ ಶಿಬಿರ ಅಂತ್ಯತ ಯಶಸ್ವಿಯಾಗಿ ನಡೆದಿದೆ.

25 ಮಾರ್ಚ್ 2016ರಂದು ಮೈಸೂರು ಜಿಲ್ಲಾ ಸಂಸ್ಥೆ ಸಹಯೋಗದೊಂದಿಗೆ ರಾಜ್ಯ ಮಟ್ಟದ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಮಾವೇಶದಲ್ಲಿ ರಾಜ್ಯದ 17 ಜಿಲ್ಲೆಗಳ ಸಹಾಯಕ ಜಿಲ್ಲಾ ಆಯುಕ್ತರುಗಳು, ಕಾರ್ಯದರ್ಶಿಗಳು, ಸ್ಥಾನಿಕ ಆಯುಕ್ತರುಗಳು, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳೂ ಭಾಗವಹಿಸಿದ್ದರು. ಇದರಲ್ಲಿ ರಾಜ್ಯಪದಾಧಿಕಾರಿಗಳೊಂದಿಗೆ ನಾನು ಭಾಗವಹಿಸಿ ಅವರುಗಳೊಂದಿಗೆ ಸಂವಾದ ನಡೆಸಿ ಅವರ ಪ್ರಗತಿಗಳನ್ನು, ಸಮಸ್ಯೆಗಳನ್ನು ಆಲಿಸಿ ಸೂಕ್ತ ಮಾರ್ಗದರ್ಶನ ಮಾಡಲಾಯಿತು.

ಒಟ್ಟಿನಲ್ಲಿ ಹೇಳುವುದಾದರೆ ಕರ್ನಾಟಕದಲ್ಲಿ ಸ್ಕೌಟಿಂಗ್- ಗೈಡಿಂಗ್ ಕಾರ್ಯಕ್ರಮಗಳು, ಶಿಬಿರಗಳು ಹಾಗೂ ಚಟುವಟಿಕೆಗಳು ಯೋಜಿತ ರೀತಿಯಲ್ಲಿ ಎಲ್ಲಾ ಕಡೆ ನಡೆಯುತ್ತಿರುವುದು ಸಂತಸದ ವಿಷಯ. ಇದು ಹೀಗೆಯೇ ಮುಂದುವರೆಯಲೆಂದು ಆಶಿಸುತ್ತೇನೆ.

ಮನ್ಮಥನಾಮ ಸಂವತ್ಸರ ಕಳೆದು ಏಪ್ರಿಲ್ ಎಂಟರಂದು ದುರ್ಮುಖಿನಾಮ ಸಂವತ್ಸರದ "ಯುಗಾದಿ" ಬರುತ್ತದೆ. ಹೊಸವರ್ಷ ನಿಮಗೆಲ್ಲಾ ಶುಭವನ್ನು ಮಾಡಲಿ ಎಂಬುದೇ ನನ್ನ ಹಾರೈಕೆ.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ
ರಾಜ್ಯ ಮುಖ್ಯ ಆಯುಕ್ತರು

# ರಾಜ್ಯ ಕಾರ್ಯದರ್ಶಿಗಳ ನುಡಿ

## ಮಹಿಳೆಯರಿಗೂ ಮಾನ್ಯತೆ ಇರಲಿ

ಈ ಜೀವ ಜಗತ್ತಿನಲ್ಲಿ ನಿಸ್ವಾರ್ಥ..... ತ್ಯಾಗ ಕರುಣೆಯಂತಹ ಗುಣಗಳನ್ನು ಹೊಂದಿರುವ ಜೀವಿ ಎಂದರೆ ಅದು ತಾಯಿ. ಇದನ್ನೇ ವಿಸ್ತರಿಸಿ ಪ್ರಾಣಿ ಪಕ್ಷಿಗಳ ಜೀವ ಜಗತ್ತಿಗೂ ವಿಸ್ತರಿಸಬಹುದು. ಮೊಟ್ಟೆಯೊಡೆದು ಹೊರ ಬರುವ ಮರಿಹಕ್ಕಿಗೆ ತಾಯಿಹಕ್ಕಿ ಹೊರಗಿನಿಂದ ಆಹಾರ ಸಂಗ್ರಹಿಸಿ ತಂದು ಮರಿಹಕ್ಕಿಯ ಬಾಯಿಗಿಡುವ ವಿಸ್ಮಯದ ದೃಶ್ಯ ಅಪ್ಯಾಯಮಾನವಾದದ್ದು. ಹಾಗೆಯೇ ಕರುವಿಗೆ ಹಾಲುಣಿಸುವ ಹಸು, ಕರುವಿಗೆ ಹಾಲುಣಿಸುವುದರಲ್ಲಿ ಅತೀತವಾದ ಆನಂದವನ್ನು ಪಡೆಯುತ್ತದೆ. ಕೋಳಿ ಮರಿಗಳನ್ನು ಆಕಾಶದಲ್ಲಿ ಹಾರಾಡುವ ಹದ್ದಿನಿಂದ ರಕ್ಷಿಸಲು ತಾಯಿ ಕೋಳಿ ತನ್ನ ರೆಕ್ಕೆಯಲ್ಲಿ ರಕ್ಷಿಸುತ್ತದೆ.

ಯಾವುದೇ ರೀತಿಯ ಸ್ವಾರ್ಥ ಆಕಾಂಕ್ಷೆಗಳನ್ನು ಇಟ್ಟುಕೊಳ್ಳದೇ ತಾಯಿ ತನ್ನ ಮಗುವಿಗೆ ಹಾಲುಣಿಸುತ್ತಾಳೆ. ಆಕಾಶದಲ್ಲಿರುವ ಚಂದ್ರನನ್ನು ತೋರಿಸಿ ತನ್ನ ಮಗು ಒಂದೆರಡು ತುತ್ತು ಜಾಸ್ತಿ ತಿನ್ನಲೆಂದು ಅಮ್ಮ ಲಾಲಿ ಹಾಡುತ್ತಾಳೆ. ಅಮ್ಮ ಎಂದರೆ ಮಮತೆಯ ಕಡಲು; ಕರುಣಾಮಯಿ. ಏಸು ಪ್ರಭುವಿನ ತಾಯಿ ಮೇರಿ. ಶ್ರೀಕೃಷ್ಣನ ತಾಯಿ ಯಶೋದ. ಶ್ರೀರಾಮ ಚಂದ್ರನ ತಾಯಿ ಕೌಸಲ್ಯ. ಇವರೆಲ್ಲರು ಪೂಜನೀಯರು. ಹಾಗೆಯೇ ನಮ್ಮ ತಾಯಂದಿರು ಸಹ ಯಾವುದೇ ಕಕ್ಕುಲಾತಿಗಳಿಲ್ಲದೆ ನಮಗೆ ಹಾಲುಣಿಸಿ. ಬೆಳೆಸಿ ಪೋಷಿಸಿದವರು. ಆದರೆ, ಅಂತಹ ತಾಯಿಯ ಕಾರುಣ್ಯಕ್ಕೆ ನಾವು ರೆಕ್ಕೆ ಬಲಿತ ಮೇಲೆ ನೀಡುವ ಕೊಡುಗೆ ಏನು...? ಈ ಪ್ರಶ್ನೆಯನ್ನು ನಾವೆಲ್ಲರೂ ಪ್ರಶ್ನಿಸಿಕೊಂಡು ತಂದೆ. ತಾಯಿಯನ್ನು ವೃದ್ಧಾಪ್ಯದಲ್ಲಿ ಪೋಷಿಸುವ ಆಸರೆ ನೀಡುವ ವಿಶಾಲ ಹೃದಯಿಗಳಾಗಬೇಕು. ಹಾಗೆಯೇ ಅದು ನಮ್ಮ ಕರ್ತವ್ಯವು ಹೌದು.

ಮಾರ್ಚ್ 8 ರಂದು ವಿಶ್ವ ಮಹಿಳಾ ದಿನಾಚರಣೆ ಆಚರಿಸಲಾಯಿತು. ತಾಯಂದಿರನ್ನು, ನಮ್ಮ ಅಕ್ಕ ತಂಗಿಯರನ್ನು ಹಾಗೂ ಮಹಿಳಾ ಜಗತ್ತಿನ ಸಾಧಕಿಯರನ್ನು ಸ್ಮರಿಸಿಕೊಂಡು ಗೌರವಿಸಿದೆವು. ಇಂದಿನ ಟೆನಿಸ್ ಕ್ರೀಡೆಯಲ್ಲಿ ನಮ್ಮ ದೇಶವನ್ನು ಪ್ರತಿನಿಧಿಸುತ್ತಿರುವ ಸಾನಿಯಾ ಮಿರ್ಜಾ, ಬಾಲ್ ಬ್ಯಾಡ್ಮಿಟನ್‌ನ ಸೈನಾ ನೆಹವಾಲ್ ಸಾಧನೆಗಳು ದೇಶಕ್ಕೆ ಖ್ಯಾತಿ ತಂದಿದೆ. ಹಾಗೆಯೇ ನಮ್ಮ ದಕ್ಷಿಣ ಏಷ್ಯಾದೇಶಗಳಲ್ಲಿ ರಾಜಕೀಯ ಅಧಿಕಾರದಲ್ಲಿದ್ದ ನಮ್ಮ ದೇಶದ ಇಂದಿರಾಜಿ, ಪಾಕಿಸ್ತಾನದ ಬೆನಜಿರ್‌ಬುಟ್ಟೋ, ಶ್ರೀಲಂಕಾದ ಸಿರಿಮಾವೊ ಬಂಡಾರನಾಯಕೆ ಅವರುಗಳು ಯಾವುದೇ ಪುರುಷ ರಾಜಕಾರಣಿಗಳಿಗಿಂತಲೂ ಕಡಿಮೆ ಇಲ್ಲ ಎನ್ನುವ ಶೈಲಿಯಲ್ಲಿ ಆಡಳಿತ ಯಂತ್ರವನ್ನು ಮುನ್ನಡಿಸಿದ್ದಾರೆ. ಹಾಗೆಯೇ ವಿಜ್ಞಾನ ಮತ್ತು ತಂತ್ರಜ್ಞಾನ ಹಾಗೂ ಸಾಹಿತ್ಯ ಕ್ಷೇತ್ರದಲ್ಲಿ ಅಸಾಮಾನ್ಯ ಸಾಧನೆ ಮಾಡಿರುವ ಮಹಿಳೆಯರು ಸಾಕಷ್ಟಿದ್ದಾರೆ.

ವಿಶ್ವ ಮಹಿಳಾ ದಿನಾಚರಣೆ ಕಾರಣಕ್ಕೆ ಇದೆಲ್ಲವನ್ನು ಸ್ಮರಿಸುತ್ತಿಲ್ಲ. ಪುರುಷ ಪ್ರದಾನ ಸಮಾಜದಲ್ಲಿ ಮಹಿಳೆಯರು ಅತ್ಯುನ್ನತ ಸಾಧನೆಗಳನ್ನು ಮಾಡಿದ್ದಾರೆ ಎನ್ನುವುದಕ್ಕೆ ಇಷ್ಟೆಲ್ಲಾ ಹೇಳಬೇಕಾಯಿತು. ಭಾರತ್ ಗೈಡ್ಸ್ ಮತ್ತು ಸ್ಕೌಟ್ಸ್ ಚಳವಳಿಯಲ್ಲಿಯೂ ಸಾಧನೆ ಮಾಡಿರುವ ಮಹಿಳೆಯರಿದ್ದಾರೆ. ಈ ದಿನಾಚರಣೆಯನ್ನು ಪರಿಚಯಿಸಿದ ಮಹಿಳೆ ಕ್ಲಾರಾ ಜೆಟ್‌ಕಿನ್ (1857–1933). ಇವರು ಜರ್ಮನಿ ದೇಶದವರು. ಉಪಾಧ್ಯಾಯಿನಿಯಾಗಿ ಹಾಗೂ

ಪತ್ರಕರ್ತೆಯಾಗಿ ಕೆಲಸ ಮಾಡಿರುವ ಕ್ಲಾರಾ ಜೆಟ್‌ಕಿನ್, ಸಮಾಜವಾದದ ನೂತನ ಚಿಂತನೆಗಳಿಗೆ ಆಕರ್ಷಿತಳಾಗಿ, ಜರ್ಮನಿಯಲ್ಲಿ ಸಕ್ರಿಯವಾಗಿದ್ದ ಕಮ್ಯುನಿಸ್ಟ್ ಪಕ್ಷದಲ್ಲಿ ಪಾಲ್ಗೊಂಡಿದ್ದರು. ಸಮಾಜದಲ್ಲಿ ಮಹಿಳೆಯರಿಗೆ ಪುರುಷರಿಗೆ ಸಿಗುವ ಸ್ವಾತಂತ್ರ ಲಭ್ಯವಾಗಬೇಕೆಂದು ಪ್ರತಿಪಾದಿಸಿದ ಮಹಿಳೆಯಲ್ಲಿ ಕ್ಲಾರಾ ಜೆಟ್‌ಕಿನ್ ಒಬ್ಬರು. ಈ ಹಿನ್ನೆಲೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಏಪ್ರಿಲ್ ತಿಂಗಳಲ್ಲಿ ಹಮ್ಮಿಕೊಂಡಿರುವ ಅಂತರ್‍ರಾಷ್ಟ್ರೀಯ ಮಹಿಳಾ ದಿನಾಚರಣೆಯನ್ನು ಶ್ರೀಮತಿ ಜೆಟ್ ಕಿನ್ ಅವರಿಗೆ ಅರ್ಪಿಸಿದೆ.

ಇತ್ತೀಚೆಗೆ ಮಂಗಳೂರಿನಲ್ಲಿ ನಿಧನರಾದ ಶ್ರೀಮತಿ ಒಕ್ಟೇವಿಯಾ ಅಲ್ಬುಕರ್ಕ್ ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಸಕ್ರಿಯರಾಗಿದ್ದವರು. ಫೆಬ್ರವರಿ 20, 1924 ರಲ್ಲಿ ಮಂಗಳೂರಿನ ಬೆಂದೂರಿನಲ್ಲಿ ಜನಿಸಿದ ಒಕ್ಟೋವಿಯಾ ಅಲ್ಬುಕರ್ಕ್ ರವರು ತಮ್ಮ 92ನೇ ವಯಸ್ಸಿನಲ್ಲಿ ನಿಧನರಾಗಿದ್ದಾರೆ. ಸ್ಕೌಟಿಂಗ್ ಸೇರಿದಂತೆ ಅನೇಕ ಸಮಾಜ ಸೇವಾ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಿಗಿಕೊಂಡಿದ್ದ ಹಿರಿಯ ಚೇತನ. ಮಂಗಳೂರು ಪುರಸಭೆಯ ಸದಸ್ಯೆಯಾಗಿ ಉಪಾಧ್ಯಕ್ಷೆಯಾಗಿ ಕಾರ್ಯನಿರ್ವಹಿಸಿದ್ದರು. ಮೈಸೂರು ವಿಶ್ವವಿದ್ಯಾಲಯ ಮತ್ತು ಮಂಗಳೂರು ವಿಶ್ವವಿದ್ಯಾಲಯಗಳಲ್ಲಿ ಸೆನೆಟ್ ಸದಸ್ಯೆಯಾಗಿ ಕಾರ್ಯ ನಿರ್ವಹಿಸಿರುವುದು ಇವರ ಹೆಗ್ಗಳಿಕೆ.

"ಸೀ ವ್ಯೂ" ಮಂಗಳೂರಿನ ಬಂದರು ಪ್ರದೇಶದಲ್ಲಿನ, ನೇತ್ರಾವತಿ ನದಿಯ ಪೂರ್ವ ದಂಡೆಯಲ್ಲಿರುವ ಬ್ರಿಟೀಷ್ ಶೈಲಿಯ ಬಂಗಲೆ. ಈ ಬಂಗಲೆಯಲ್ಲಿ ಜವಾಹರ್‌ಲಾಲ್ ನೆಹರು ವಾಸ್ತವ್ಯ ಹೂಡಿದ್ದರು. ಇಲ್ಲಿಯೇ ಭಾರತದ ಪ್ರಪ್ರಥಮ ಹೆಂಚಿನ ಕಾರ್ಖಾನೆ ಪ್ರಾರಂಭವಾಗಿದ್ದು. ಈ ಕಾರ್ಖಾನೆ ಆಲೆಕ್ಸ್ ಆಲ್ಬುಕರ್ಕ್ ರವರು 1868ರಲ್ಲಿ ಸ್ಥಾಪಿಸಿದ್ದು. ಒಕ್ಟೇವಿಯಾರವರು ಸೆರೆಲ್ ಆಲ್ಬುಕರ್ಕ್‌ರವರನ್ನು ವಿವಾಹವಾಗಿ ಆಲ್ಬುಕರ್ಕ್ ಮನೆತನಕ್ಕೆ ಸೊಸೆಯಾದರು. ಅಂದಿನ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಸಕ್ರೀಯ ಪಾತ್ರವಹಿಸಿದ್ದ ಆಲ್ಬುಕರ್ಕ್ ಮನೆತನಕ್ಕೆ ವಿಶೇಷವಾದ ಗೌರವವಿತ್ತು. ಮಹಾತ್ಮ ಗಾಂಧೀಜಿಯವರು ನಡೆಸಿದ ಉಪ್ಪಿನ ಸತ್ಯಾಗ್ರಹವನ್ನು ಮಂಗಳೂರಿನ ಸಮುದ್ರ ದಂಡೆಯಲ್ಲಿಯೂ ನಾಯಕತ್ವ ವಹಿಸಿ ನಡೆಸಿದ ಹಿರಿಮೆ ಆಲ್ಬುಕರ್ಕ್ ಮನೆತನದ ಹಿರಿಯರಿಗಿದೆ.

ಸ್ಕೌಟಿಂಗ್ ಸಂಸ್ಥೆಯಲ್ಲಿ ಬಹು ಮುಖ್ಯ ಪಾತ್ರವಹಿಸಿದ್ದ ಇವರು ಮೊಟ್ಟ ಮೊದಲಿಗೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಜಿಲ್ಲಾ ಗೈಡ್ ಆಯುಕ್ತರಾಗಿ ಕಾರ್ಯ ನಿರ್ವಹಿಸಿದ್ದರು. ಕೇವಲ 4 ಗೈಡ್ ತಂಡಗಳಿದ್ದ ಗಣತಿಯನ್ನು ಸುಮಾರು 68ಕ್ಕೂ ಹೆಚ್ಚು ತಂಡಗಳನ್ನಾಗಿ ಹೆಚ್ಚಿಸಿದ್ದು ಇವರ ಹೆಗ್ಗಳಿಕೆ. ನಂತರದಲ್ಲಿ ರಾಜ್ಯ ಗೈಡ್ ಆಯುಕ್ತರಾಗಿ ಸೇವೆ ಸಲ್ಲಿಸಿದ್ದ ಇವರು ರಾಷ್ಟ್ರೀಯ ಸಂಸ್ಥೆಯ ಪರಿಷತ್ತಿನ ಸದಸ್ಯೆಯಾಗಿದ್ದರು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ರಾಷ್ಟ್ರೀಯ ಸಂಸ್ಥೆಯ ರೇಂಜರ್ ವಿಭಾಗಕ್ಕೆ ಸ್ಥಾನಿಕ ಆಯುಕ್ತರಾಗಿ ಹಾಗು ಮುಖ್ಯ ಗೈಡ್ ಆಯುಕ್ತರಾಗಿ ಸೇವೆ ಸಲ್ಲಿಸಿದ ಇವರು ದೇಶದಾದ್ಯಂತ ಪ್ರವಾಸ ಮಾಡಿ ವಿಶೇಷವಾಗಿ ರೋವರ್ ಮತ್ತು ರೇಂಜರ್ ತಂಡಗಳು ಹೆಚ್ಚು ಪರಿಣಾಮಕಾರಿಯಾಗಿ ಕಾರ್ಯ ನಿರ್ವಹಿಸುವಂತೆ ಕ್ರಮ ಕೈಗೊಂಡರು. ಇವರ ಸಮಾಜ ಸೇವೆಗೆ ಮತ್ತು ಸ್ಕೌಟಿಂಗ್ ಚಳವಳಿಗೆ ನೀಡಿದ ಕೊಡುಗೆಗೆ ಅನೇಕ ಪ್ರಶಸ್ತಿಗಳು ಸಂದಾಯವಾಗಿವೆ. ಈ ಹಿನ್ನೆಲೆಯಲ್ಲಿ ಮಹಿಳೆಯರು ಸಾಧಕಿಯರಾಗಿ ಮಾನ್ಯತೆ ಪಡೆದ್ದಿದ್ದಾರೆ. ಅಡುಗೆ ಕೆಲಸದಿಂದ ಇಡಿದು ಅಂತರಿಕ್ಷದಲ್ಲಿ ಬಾಹ್ಯಾಕಾಶ ನೌಕೆಯಲ್ಲಿ ಸಂಶೋಧನೆ ನಡೆಸುವ ಸಾರ್ಥಕವಾದ ವೈಜ್ಞಾನಿಕ ಕ್ಷೇತ್ರಯಲ್ಲಿಯೂ ಮಹಿಳೆಯರು ಬಹುಮಾನ್ಯತೆ ಪಡೆದಿದ್ದಾರೆ.

ತಮ್ಮ ವಿಶ್ವಾಸಿ

ಸಿದ್ದಯ್ಯ
ರಾಜ್ಯ ಕಾರ್ಯದರ್ಶಿ



## ಶ್ರದ್ಧಾಂಜಲಿ

ಹಿರಿಯ ಗೈಡರ್ ಆಗಿದ್ದ, ಜಿಲ್ಲಾಮಟ್ಟದಲ್ಲಿ ರಾಜ್ಯಮಟ್ಟ ಹಾಗು ರಾಷ್ಟ್ರಮಟ್ಟದಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸಿದ್ದ ಶ್ರೀಮತಿ ಓಕ್ಟೇವಿಯು ಆಲ್ಬುಕರ್ಕ್‌ರವರು ದಿನಾಂಕ 09 ಮಾರ್ಚ್ 2016 ರಂದು ಮಂಗಳೂರಿನಲ್ಲಿ ನಿಧನ ಹೊಂದಿದರು. ಅವರು ಸ್ಕೌಟಿಂಗ್ – ಗೈಡಿಂಗ್ ಕ್ಷೇತ್ರದಲ್ಲಿ ಅನೇಕ ಹುದ್ದೆಗಳನ್ನು ಅಲಂಕರಿಸಿ ಚಳವಳಿಯ ಅಭಿವೃದ್ಧಿಗೆ ಕಾರಣಕರ್ತರಾಗಿದ್ದರು. ಶಿಕ್ಷಣ ಕ್ಷೇತ್ರ, ಧಾರ್ಮಿಕ ಕ್ಷೇತ್ರ, ಸಾಮಾಜಿಕ ಕ್ಷೇತ್ರ ಮತ್ತು ರಾಜಕೀಯ ಕ್ಷೇತ್ರಗಳಲ್ಲಿಯೂ ಸಹ ಸಕ್ರಿಯವಾಗಿ ತೊಡಗಿಸಿಕೊಂಡು ಸೇವೆ ಸಲ್ಲಿಸಿದ್ದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅತ್ಯುನ್ನತ ಪ್ರಶಸ್ತಿಯಾದ 'ಬೆಳ್ಳಿ ಆನೆ' ಪದಕ, ಕರ್ನಾಟಕ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಅವುಗಳಲ್ಲದೆ ಹತ್ತು ಹಲವಾರು ಪ್ರಶಸ್ತಿಗಳನ್ನು ವಿವಿಧ ಸಂಘ ಸಂಸ್ಥೆಗಳು ನೀಡಿವೆ.

ಅವರ ನಿಧನದಿಂದ ಉಂಟಾದ ದುಃಖವನ್ನು ಭರಿಸಲು ಕುಟುಂಬದವರಿಗೆ ಶಕ್ತಿಯನ್ನು ಕೊಡಲೆಂದು ಹಾಗೂ ಅವರ ಆತ್ಮಕ್ಕೆ ಚಿರ ಶಾಂತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ. ಅವರ ಕಾರ್ಯಕ್ಷೇತ್ರ ಹಾಗೂ ಸಾಧನೆಗಳನ್ನು ಒಳಗೊಂಡ ಕಿರು ಲೇಖನವನ್ನು ಅವರ ಗೌರವ ಸೂಚಕವಾಗಿ ಈ ಕೆಳಗೆ ಪ್ರಕಟಿಸಲಾಗಿದೆ.

**– ರಾಜ್ಯ ಕಾರ್ಯದರ್ಶಿ**

## ಓಕ್ಟೇವಿಯ ಆಲ್ಬುಕರ್ಕ್ ಅವರ ಕಾರ್ಯಕ್ಷೇತ್ರ ಹಾಗೂ ಸಾಧನೆಗಳು

ಸ್ಕೌಟ್ಸ್ ಗೈಡ್ಸ್‌ನೊಂದಿಗೆ ನಿಕಟ ಸಂಪರ್ಕಹೊಂದಿದ್ದ ಮತ್ತು ಸ್ಕೌಟ್ಸ್–ಗೈಡ್ಸ್ ಚಳವಳಿಗೆ ತಮ್ಮದೇ ಆದ ಕೊಡಿಗೆ ನೀಡಿದ ಶ್ರೀಮತಿ ಓಕ್ಟೇವಿಯಾ ಆಲ್ಬುಕರ್ಕ್‌ರವರು ದಿನಾಂಕ:– 9.03.2016 ರಂದು ತಮ್ಮ 92ನೇ ವಯಸ್ಸಿನಲ್ಲಿ ಮಂಗಳೂರಿನಲ್ಲಿ ನಿಧನಹೊಂದಿದರು.

ಸ್ಕೌಟಿಂಗ್ ಗೈಡಿಂಗ್ ಅಲ್ಲದೆ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲೂ ಸಹ ತಮ್ಮ ಛಾಪನ್ನು ಮೂಡಿಸಿದ್ದಾರೆ.



**ಸ್ಕೌಟಿಂಗ್–ಗೈಡಿಂಗ್** : ಆಗಿನ ಅವಿಭಜಿತ (ಉಡುಪಿ ಜಿಲ್ಲೆಯೂ ಸೇರಿದಂತೆ) ದಕ್ಷಿಣ ಕನ್ನಡ ಜಿಲ್ಲಾ ಆಯುಕ್ತರಾಗಿ 1965 ರಿಂದ 1975 ರವರೆಗೆ 10 ವರ್ಷಗಳ ಕಾಲ ಸೇವೆ ಸಲ್ಲಿಸಿ ಜಿಲ್ಲೆಯಲ್ಲಿನ ಸ್ಕೌಟಿಂಗ್– ಗೈಡಿಂಗ್ ಬೆಳವಣಿಗೆಯಲ್ಲಿ, ತಮ್ಮ ಕೊಡುಗೆ ನೀಡಿದರು. ಅನಂತರ 1975 ರಿಂದ 77 ರವರೆಗೆ ರಾಜ್ಯ ಆಯುಕ್ತರು (ಗೈಡ್ಸ್) ಆಗಿ ರಾಷ್ಟ್ರೀಯ ಪರಿಷತ್ತಿನ ಸದಸ್ಯರಾಗಿ ಕರ್ತವ್ಯ ನಿರ್ವಹಿಸಿರುತ್ತಾರೆ. ಇದೇ ಸಂದರ್ಭದಲ್ಲಿ ವಿಶೇಷ ಅಗತ್ಯವುಳ್ಳ ಮಕ್ಕಳಿಗಾಗಿ ಸ್ಕೌಟಿಂಗ್ ಗೈಡಿಂಗ್ ಪ್ರಾರಂಭಿಸಿ 40 ವಯಸ್ಕ ನಾಯಕರನ್ನು ಇದಕ್ಕಾಗಿ ತರಬೇತಿಗೊಳಿಸಿದ ಇವರ ಕಾರ್ಯ ಅತ್ಯಂತ ಶ್ಲಾಘನೀಯವಾದದ್ದು.

ಇವರ ಪ್ರಾಮಾಣಿಕ ಹಾಗೂ ಬದ್ಧತೆಯುಳ್ಳ ಕಾರ್ಯಗಳಿಂದಾಗಿ ಉನ್ನತ ಹುದ್ದೆಗಳನ್ನು ನೀಡಲಾಯಿತು. ಅದರಂತೆ 1977ರಲ್ಲಿ ರೇಂಜರಿಂಗ್ ವಿಭಾಗಕ್ಕೆ ರಾಷ್ಟೀಯ ಸ್ಥಾನಿಕ ಆಯುಕ್ತರ ಕಾರ್ಯಭಾರ ನಿರ್ವಹಿಸಲು ನೇಮಿಸಲಾಯಿತು. 1980ರವರೆಗೆ ಇದರಲ್ಲಿ ಸೇವೆ ಸಲ್ಲಿಸಿದ ನಂತರ ಭಾರತದ ಮುಖ್ಯ ಆಯುಕ್ತರು (ಗೈಡ್ಸ್) ಆಗಿ ನೇಮಕಗೊಂಡರು. 1982 ರವರೆಗೆ ಈ ಹುದ್ದೆಯಲ್ಲಿದ್ದಾಗ ಯುವ ಜನತೆಯ ಅಭಿವೃದ್ಧಿ ಮತ್ತು ಮಹಿಳೆಯರ ಸಾಮಾಜಿಕ ಸೇವೆ ಕಾರ್ಯಕ್ರಮಗಳಿಗಾಗಿ ಇಡೀ ಭಾರತದಲ್ಲಿ ಪ್ರವಾಸಗೈದರು.





**ಸಾಮಾಜಿಕ :–** ಸಾಮಾಜಿಕ ಕ್ಷೇತ್ರದಲ್ಲಿಯೂ ಸಹ ಇವರ ಕೊಡುಗೆ ಅಪಾರ. ಮಂಗಳೂರಿನ ಲೇಡಿಸ್ ಸೋಷಿಯಲ್ ಸರ್ವಿಸ್ ಲೀಗ್ ಎಂಬ ಸೇವಾ ಸಂಸ್ಥೆಯ ಅಧ್ಯಕ್ಷಣಿಯಾಗಿ 1951 ರಿಂದ 30 ವರ್ಷಗಳ ಕಾಲ ಕಾರ್ಯನಿರ್ವಹಿಸಿ ವಿವಿಧ ಕಾರ್ಯಕ್ರಮಗಳನ್ನು ನಡೆಸಿದ್ದಾರೆ "ಮಂಗಳೂರು ಚೆಶೈರ್ ಹೋಂ ಫಾರ್‌ಉಮನ್" ಎಂಬುದರ ಸ್ಥಾಪಕರು. 1969–70 ಮತ್ತು 70–71ರ ಅವಧಿಗಳಿಗೆ ಮಂಗಳೂರಿನ "ಲಯನ್ಸ್ ಕ್ಲಬ್‌ನ ಲೇಡಿ ಲಯನ್ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಮಂಗಳೂರಿನ ಮಹಾತ್ಮಗಾಂಧಿ ಶಾಂತಿ ಪ್ರತಿಷ್ಠಾನದ ಅಧ್ಯಕ್ಷೆಯಾಗಿ ಸೇವೆ ಸಲ್ಲಿಸಿದ ಸಂದರ್ಭದಲ್ಲಿ "ಮಹಾತ್ಮಗಾಂಧಿಯವರ ಅಣಿಮುತ್ತುಗಳು ಪುಸ್ತಕದ ಇಂಗ್ಲೀಷ್ ಮತ್ತು ಕನ್ನಡ ಆವೃತ್ತಿಗಳ 2 ಸಾವಿರ ಪ್ರತಿಗಳನ್ನು ಮುದ್ರಿಸಿರುತ್ತಾರೆ.

**ಶೈಕ್ಷಣಿಕ:–** 1978 ರಲ್ಲಿ ಮೈಸೂರು ವಿದ್ಯಾಲಯದ ಸೆನೆಟ್ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಆ ಸಂದರ್ಭದಲ್ಲಿ ಮಂಗಳೂರು ವಿಶ್ವವಿದ್ಯಾಲಯದ ಸ್ಥಾಪನೆಗಾಗಿ ಪ್ರೊ.ವಿ.ಕೆ.ಆರ್.ವಿ.ರಾವ್ ನೇತೃತ್ವದಲ್ಲಿ ರಚಿಸ್ಪಟ್ಟಿದ್ದ ಸಮಿತಿಯಲ್ಲಿ ಕಾರ್ಯನಿರ್ವಹಿಸಿದ್ದಾರೆ.

**ಧಾರ್ಮಿಕ:–** ದಕ್ಷಿಣ ಕನ್ನಡ " ಕ್ಯಾಥೋಲಿಕ್ ಅಸೋಸಿಯೆಷನ್ ಅಧ್ಯಕ್ಷೆಯಾಗಿ 1983 ರಿಂದ 86 ರವರೆಗೆ ಸೇವೆಸಲ್ಲಿಸಿದ್ದಾರೆ. 1959 ರಿಂದ 80 ರವರೆಗೆ "ಡಯೋಸಿಸನ್ ಕೌನ್ಸಿಲ್ ಆಫ್ ಕ್ಯಾಥೋಲಿಕ್ ವ್ಯುಮೆನ್" ಸಂಸ್ಥೆಯ ಅಧ್ಯಕ್ಷೆಯಾಗಿ ಸೇವೆಸಲ್ಲಿಸಿದ್ದಾರೆ.



**ರಾಜಕೀಯ:–** 1961 ರಿಂದ 65 ರವರೆಗೆ ಮಂಗಳೂರು ಪಟ್ಟಣ ಪುರಸಭೆಯ ಸದಸ್ಯರಾಗಿ ಮತ್ತು ಪುರಸಭೆಯಲ್ಲಿ ಕಾಂಗ್ರೆಸ್ ಪಕ್ಷದ ನಾಯಕಿಯಾಗಿ ಸೇವೆಸಲ್ಲಿಸಿದ್ದರು. 1965 ರಿಂದ 68 ರವರೆಗೆ ಮಂಗಳೂರು ಪುರಸಭೆಯ ಉಪಾಧ್ಯಕ್ಷೆಯಾಗಿ ಸೇವೆ ಸಲ್ಲಿಸಿದ್ದಾರೆ. 1968–69ರ ಅವಧಿಯಲ್ಲಿ ಪ್ರಪ್ರಥಮ ಮಹಿಳಾ ಅಧ್ಯಕ್ಷ ಪ್ರತಿನಿಧಿ ಹಾಗೂ ಸ್ಥಾಯಿ ಸಮಿತಿಯ ಪ್ರಥಮ ಮಹಿಳಾ ಅಧ್ಯಕ್ಷೆಯಾಗಿ ಕಾರ್ಯ ನಿರ್ವಹಣೆ.

1970–72 ಮತ್ತು 1974–80ರ ಅವಧಿಯಲ್ಲಿ ಕರ್ನಾಟಕ ವಿಧಾನಪರಿಷತ್ತಿನ ಸದಸ್ಯೆಯಾಗಿ ಕಾರ್ಯನಿರ್ವಹಿಸಿದರು.

**ಗೌರವಗಳು ಹಾಗೂ ಪದಕಗಳು**

* ಪೂಜ್ಯ ಪೋಪ್ ಪಾಲ್ vi ಇವರಿಂದ ಚರ್ಚ್ ಮತ್ತು ದೇಶಕ್ಕಾಗಿ ಸಲ್ಲಿಸಿದ ಸೇವೆಯನ್ನು ಪರಿಗಣಿಸಿ ಚಿನ್ನದ ಪದಕ ಪ್ರಧಾನ

* ಮದ್ಯವ್ಯಸನಿಗಳ ಪುನರ್ ವಸತಿ ಕಾರ್ಯಕ್ಕಾಗಿ ಅಮೇರಿಕಾದ ಕ್ಲಿಕ್ಸ್ ಸೊಸೈಟಿಯವರಿಂದ ಅಂತರ್‌ರಾಷ್ಟ್ರೀಯ ಪದಕ ಪ್ರಧಾನ.

* 1967 ರಲ್ಲಿ ಕನ್ನಡ ರಾಜ್ಯೋತ್ಸವ ಪ್ರಶಸ್ತಿ

* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಅತಿ ಉನ್ನತ ಪ್ರಶಸ್ತಿಯಾದ "ಬೆಳ್ಳಿ ಆನೆ" ಗೌರವವನ್ನು 1980ರಲ್ಲಿ ಅಂದಿನ ರಾಷ್ಟ್ರಪತಿ ಶ್ರೀ ನೀಲಂಸಂಜೀವ ರೆಡ್ಡಿಯವರಿಂದ ಪಡೆದರು.

* ವಿಕಲಚೇತನರಿಗಾಗಿ ಇವರು ಸಲ್ಲಿಸಿದ ಸೇವೆಯನ್ನು ಪರಿಗಣಿಸಿ 1994ರಲ್ಲಿ ಅಂದಿನ ಮುಖ್ಯಮಂತ್ರಿ ಶ್ರೀ ವೀರಪ್ಪ ಮೊಯಿಲಿ ಅವರಿಂದ ವರ್ಷದ ವ್ಯಕ್ತಿ ಪದಕ ಪ್ರಧಾನ.

## ರಾಜ್ಯಮಟ್ಟದ ಪರಿಸರ ಅಧ್ಯಯನ ಮತ್ತು ಚಾರಣ ಶಿಬಿರ

ದಿನಾಂಕ : 24-02-2016 ರಿಂದ 28-02-2016 ರ ವರೆಗೆ ಕೊಡಗು ಜಿಲ್ಲೆಯ ಕಕ್ಕಬ್ಬೆ ಸ.ಮಾ.ಪ್ರಾ ಶಾಲೆಯಲ್ಲಿ ರಾಜ್ಯಮಟ್ಟದ ಪರಿಸರ ಅಧ್ಯಯನ ಮತ್ತು ಚಾರಣ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಈ ಶಿಬಿರದಲ್ಲಿ ಬೆಳಿಗ್ಗೆ 10 ಗಂಟೆಗೆ ಶಿಬಿರದ ನೋಂದಣಿ ಮಾಡಲಾಗಿ 16 ಜಿಲ್ಲೆಗಳಿಂದ 104 ರೋವರ್ಸ್, 104 ರೇಂಜರ್ಸ್ ಒಟ್ಟು 208 ಶಿಬಿರಾರ್ಥಿಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಜಿಮ್ಮಿ ಸಿಕ್ವೇರಾ ಎಲ್.ಟಿ.(ಎಸ್) ಜಿಲ್ಲಾ ಆಯುಕ್ತರು ಸ್ಕೌಟ್ಸ್ ಉಪನಾಯಕರಾಗಿ ಶ್ರೀ ಪ್ರತೀಮ್ ಕುಮಾರ್ ಎಲ್.ಟಿ.(ಎಸ್) ಜಿಲ್ಲಾ ತರಬೇತಿ ಆಯುಕ್ತರು. ದಕ್ಷಿಣ ಕನ್ನಡ, ರೇಂಜರ್ ವಿಭಾಗದಲ್ಲಿ ನಾಯಕಿಯಾಗಿ ಶ್ರೀಮತಿ ಸಗಾಯಮೇರಿ ಸೇವೆ ಸಲ್ಲಿಸಿದರು.

ಸಂಜೆ ಪ್ರಾರಂಭವಾದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕೆ.ಬಿ. ಕಾಳಪ್ಪ, ಪ್ರಧಾನ ಆಯುಕ್ತರು ವಹಿಸಿದ್ದರು. ಉದ್ಘಾಟಕರಾಗಿ ಶಕ್ತಿ ದಿನಪತ್ರಿಕೆಯ ಪ್ರಧಾನ ಸಂಪಾದಕರಾದ ಶ್ರೀ ಅನಂತ ಶಯನವರು ಭಾಗವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕರ್ನಾಟಕ ರಾಜ್ಯ ಮಾಲಿನ್ಯ ಮಂಡಳಿ ಪ್ರಾದೇಶಿಕ ಕೊಡಗು ಪರಿಸರಾಧಿಕಾರಿಗಳವರಾದ ಶ್ರೀ ಗಣೇಶ, ಶ್ರೀ ಕೆ.ಟಿ. ಬೇಬಿಮ್ಯಾಥ್ಯೂ, ಉಪಾಧ್ಯಕ್ಷರು, ಭಾ.ಸೌ.-ಗೈ, ಶ್ರೀಮತಿ ಶೈಲ ಕುಟ್ಟಪ್ಪ, ಅಧ್ಯಕ್ಷರು, ಕಕ್ಕಬ್ಬೆ ಗ್ರಾಮ ಪಂಚಾಯಿತಿ, ಶ್ರೀಮತಿ ಸೀತ ಚೆಟ್ಟಿಯಪ್ಪ, ಗೈಡ್ ಆಯುಕ್ತರು, ಶ್ರೀ ರಾಜ, ದಾನಿಗಳು, ಶ್ರೀ ಐ.ಎ. ಅಯ್ಯಣ್ಣ, ಶ್ರೀ ಸುರೇಶ್ ಚಂಗಪ್ಪ ಮಡಿಕೇರಿ, ಸ್ಥಳೀಯ ಸಂಸ್ಥೆ ಅಧ್ಯಕ್ಷರು ಹಾಜರಿದ್ದರು.

ದಿನಾಂಕ 25-02-2016 ರಂದು ಬೆಳಗ್ಗೆ ಚಾರಣ ಶಿಬಿರದ ಉದ್ಘಾಟನೆಯನ್ನು ಕೊಡಗು ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರಾದ ಶ್ರೀಬಿ. ಬಸವರಾಜು ರವರು ಹಸಿರು ನಿಶಾನೆ ತೋರಿಸುವುದರ ಮೂಲಕ ನೆರವೇರಿಸಿದರು. ಕಕ್ಕಬ್ಬೆಯಿಂದ ತಡಿಯಂಡ ಮೋಳ್ ಬೆಟ್ಟದ ಕಡೆಗೆ ಚಾರಣ ಹಮ್ಮಿಕೊಳ್ಳಲಾಗಿತ್ತು. ಬೆಟ್ಟದಿಂದ ಕೆಳಗೆ ಇಳಿದು ಊಟವನ್ನು ಮಾಡಿದ ನಂತರ ನಾಲ್ಕು ನಾಡು ಅರಮನೆಗೆ ತೆರಳಿ, ಅರಮನೆಯನ್ನು ವೀಕ್ಷಿಸಿ ಅದರ ಇತಿಹಾಸವನ್ನು ಶ್ರೀವನಿತ ಕುಮಾರ್ ರವರು ತಿಳಿಸಿಕೊಟ್ಟರು. ಸಂಜೆ ಶಿಬಿರಾಗ್ನಿ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀಮತಿ ಶೈಲ ಕುಟ್ಟಪ್ಪ, ಅಧ್ಯಕ್ಷೆ ಕಕ್ಕಬ್ಬೆ ಗ್ರಾಮ ಪಂಚಾಯಿತಿ ಇವರು ನೆರವೇರಿಸಿದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಸುರೇಶ್ ಚಂಗಪ್ಪ, ಮಾಜಿ ಅಧ್ಯಕ್ಷರು ಕಕ್ಕಬ್ಬೆ ಗ್ರಾಮ ಪಂಚಾಯಿತಿ ಇವರು ವಹಿಸಿದ್ದರು. ಸ್ಥಳೀಯ ಪ್ರತಿಭೆಗಳಾದ ಬುಡಕಟ್ಟು ಜನಾಂಗದ ನೃತ್ಯವನ್ನು ಪ್ರದರ್ಶಿಸಲಾಯಿತು.

ದಿನಾಂಕ : 26-02-2016 ರಂದು ಧ್ವಜಾರೋಹಣ ಮುಗಿಸಿ ಸಂಜೆ ಕಕ್ಕಬ್ಬೆಯಿಂದ ಚೆಯ್ಯಂಡಾಣೆಗೆ ಬಸ್ಸಿನಲ್ಲಿ, ನಂತರ ಚೆಯ್ಯಂಡಾಣೆಯಿಂದ ಚೇಲಾವರದ ಕಡೆಗೆ ಪ್ರಯಾಣವನ್ನು ಕಾಲ್ನಡಿಗೆ ಮೂಲಕ ಪ್ರಾರಂಭಿಸಿ ಚೇಲಾವರ ಶಾಲಾ ಆವರಣದಲ್ಲಿ ಬೆಳಗಿನ ಉಪಹಾರವನ್ನು ಸೇವಿಸಿ ಚೋಮ ಕುಂದಿಗೆ ಚಾರಣ ಮಾಡಲಾಯಿತು. ಬೆಟ್ಟದ ಪರಿಸರದ ಬಗ್ಗೆ ಅರಣ್ಯ ಇಲಾಖೆಯವರು ಮಾಹಿತಿಯನ್ನು ನೀಡಿದರು. ಕೊಡಗಿನಲ್ಲಿ ಸಿಂಹ ಮತ್ತು ಕರಡಿಯನ್ನು ಹೊರತುಪಡಿಸಿ ಎಲ್ಲಾ ಜಾತಿಯ ಮೃಗ ಪಕ್ಷಿಗಳು ಮತ್ತು ಗಿಡಮೂಲಿಕೆಗಳನ್ನು ಕಾಣಬಹುದು ಎಂಬ ಮಾಹಿತಿಯನ್ನು ನೀಡಿದರು. ನಂತರ ಚೆಯ್ಯಂಡಾಣೆಗೆ ಬಂದು ಚೆಯ್ಯಂಡಾಣೆಯಿಂದ ಕಕ್ಕಬ್ಬೆಗೆ ಬಸ್ಸಿನಲ್ಲಿ ಹಿಂದಿರುಗಲಾಯಿತು. ರಾತ್ರಿ ಶಿಬಿರಾಗ್ನಿ ಕಾರ್ಯಕ್ರಮವನ್ನು ಕೊಡಗು ಜಿಲ್ಲೆಯ ಜಿಲ್ಲಾಧಿಕಾರಿಗಳಾದ ಶ್ರೀ ಮೀರ್ ಅನೀಸ್ ಅಹಮ್ಮದ್ ರವರು ಉದ್ಘಾಟಿಸಿದರು. ಜಿಲ್ಲಾಧಿಕಾರಿಯವರು ವಿವಿಧ ಜಿಲ್ಲೆಗಳಿಂದ ಆಗಮಿಸಿದ ಶಿಬಿರಾರ್ಥಿಗಳನ್ನು ಅಭಿನಂದಿಸಿ ತಮ್ಮ ತಮ್ಮ ಜಿಲ್ಲೆಯ ಆಚಾರ ವಿಚಾರ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವುದರ ಮೂಲಕ ನಾವೆಲ್ಲರೂ ಭವ್ಯ ಭಾರತದ ಮಕ್ಕಳೆಂದು ಸಾರಲು ಇದೊಂದು ವೇದಿಕೆ. ಇದರ ಸದುಪಯೋಗವನ್ನು ನೀವೆಲ್ಲರೂ ಪಡೆಯಬೇಕೆಂದು ಸಲಹೆ ನೀಡಿದರು. ಇದೇ ಸಮಯದಲ್ಲಿ ಜಿಲ್ಲೆಯ ಹಿರಿಯ ಸ್ಕೌಟ್ ಶಿಕ್ಷಕರಾದ ಶ್ರೀ ಕ್ಲೆಮೆಂಟ್ ಮಾಕ್ಲಿನ್‌ರವರನ್ನು ಹೂಗುಚ್ಚ ನೀಡಿ ನೆನಪಿನ ಕಾಣಿಕೆ ನೀಡುವುದರ ಮೂಲಕ ಗೌರವಿಸಲಾಯಿತು.

ದಿನಾಂಕ 27-02-2016 ರ ಬೆಳಗ್ಗೆ ಇಗ್ಗುತಪ್ಪ ದೇವಾಲಯದ ದೇವರ ಕಾಡನ್ನು ವೀಕ್ಷಿಸುತ್ತ ಅದರ ವಿವರಣೆಯನ್ನು ನೀಡುತ್ತ ಮಲ್ಮ ಬೆಟ್ಟಕ್ಕೆ ತೆರಳಿ ಅದನ್ನು ವೀಕ್ಷಿಸಿ ಇಗ್ಗುತಪ್ಪ ದೇವಾಲಯಕ್ಕೆ ತೆರಳಿ ಅಲ್ಲಿಯ ಇತಿಹಾಸವನ್ನು ಪ್ರಧಾನ ಅರ್ಚಕರಿಂದ ಪಡೆದು ನಂತರ ಸಭಾಂಗಣದಲ್ಲಿ ಕಾಫಿ, ಕರಿಮೆಣಸು, ಏಲಕ್ಕಿ, ಚಹಾ ಬೆಳೆಯ ಬಗ್ಗೆ ಹಾಗೂ ಕೊಡಗಿನ ಸಂಸ್ಕೃತಿ ಮತ್ತು ಆಚಾರ ವಿಚಾರ ಆಹಾರ ಪದ್ಧತಿಯ ಬಗ್ಗೆ ಉಪನ್ಯಾಸವನ್ನು ಶ್ರೀ ಜಿಮ್ಮಿ ಸಿಕ್ವೇರಾರವರು ನೀಡಿದರು. ನಂತರ ತುಲಾಭಾರ ಮಹಾ ಪೂಜೆಯಲ್ಲಿ ಎಲ್ಲರೂ ಭಾಗವಹಿಸಿ ದೇವರ ದರ್ಶನ ಪಡೆಯಲಾಯಿತು. ನಂತರದಲ್ಲಿ ಪ್ರಸಾದ ಸ್ವೀಕರಿಸಿ ರಮಣೀಯವಾದ ಪರಿಸರದ ಬಗ್ಗೆ ತಿಳಿದುಕೊಂಡು ಶ್ರೀಮತಿ ಸಗಾಯ ಮೇರಿ, ಶ್ರೀ ಪ್ರತೀಮ್ ಕುಮಾರ್‌ರೊಂದಿಗೆ ಪರಿಸರವನ್ನು ವೀಕ್ಷಣೆ ಮಾಡುತ್ತಾ ಹಿಂದಿರುಗಲಾಯಿತು.

ಸಂಜೆ ಸಮಾರೋಪ ಕಾರ್ಯಕ್ರಮವನ್ನು ನಡೆಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ.ಬಿ. ಕಾಳಪ್ಪನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಕೆ.ಟಿ. ಬೇಬಿಮ್ಯಾಥ್ಯೂ, ಶ್ರೀಮತಿ ಶೈಲ ಕುಟ್ಟಪ್ಪ ದಾನಿಗಳಾದ ರಾಜ, ಶ್ರೀ ಸುರೇಶ್ ಚಂಗಪ್ಪ, ವಿರಾಜಪೇಟೆ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಯವರಾದ ಶ್ರೀಮತಿ ನಳಿನಾಕ್ಷಿ ಶ್ರೀ ಮುತ್ತಪ್ಪ, ಶ್ರೀ ಬಿ.ಬಿ. ಜಾಜಿ, ಶ್ರೀಮತಿ ಮೈಥಿಲಿ ರಾವ್ ಹಾಜರಿದ್ದರು. ಶ್ರೀ ರಾಜ ಮತ್ತು ಶ್ರೀಮತಿ ಶೈಲ ಕುಟ್ಟಪ್ಪ ನವರಿಗೆ ಶಾಲು ಹೊದಿಸಿ ಸನ್ಮಾನಿಸಲಾಯಿತು.

ದಿನಾಂಕ 28-02-2016 ರಂದು ಸಂಜೆ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಲಾಯಿತು. ನಂತರ ಬೆಳಗ್ಗೆ ಸಭಾಂಗಣದಲ್ಲಿ ಸಂಸ್ಥೆಯ ಬಗ್ಗೆ ಉಪನ್ಯಾಸವನ್ನು ನೀಡಲಾಯಿತು.

## ಹ್ಯಾಮ್ ರೇಡಿಯೋ ತರಬೇತಿ

ದಿನಾಂಕ : 01-03-2016 ರಿಂದ 05-03-2016 ರ ವರೆಗೆ ರಾಜ್ಯ ಪ್ರಧಾನ ಕಛೇರಿ ನಂ. 39, ಶಾಂತಿಗೃಹ, ಅರಮನೆ, ರಸ್ತೆ, ಬೆಂಗಳೂರು ಇಲ್ಲಿ ರಾಜ್ಯಮಟ್ಟದ ಹ್ಯಾಮ್ ಅಮೆಚೂರೂ ರೇಡಿಯೋ ಹವ್ಯಾಸಿ ತರಬೇತಿ ಶಿಬಿರವನ್ನು ರೋವರ್ಸ್/ರೇಂಜರ್ಸ್‌ಗಳಿಗೆ ಆಯೋಜಿಸಲಾಗಿತ್ತು.

ಸದರಿ ಶಿಬಿರಕ್ಕೆ 15 ಜಿಲ್ಲೆಗಳಿಂದ 23 ರೋವರ್ಸ್ ಮತ್ತು 18 ರೇಂಜರ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದ ಸಂಪನ್ಮೂಲ ವ್ಯಕ್ತಿಯಾಗಿ ಶ್ರೀ ರಾಮ್ ಮೋಹನ್ ರವರು ಹ್ಯಾಮ್ ತರಬೇತಿಯನ್ನು ನೀಡಿದರು. ಜೊತೆಗೆ ಹ್ಯಾಮ್ ತರಬೇತಿ ಹೊಂದಿದ ರೋವರ್ಸ್/ರೇಂಜರ್ಸ್‌ಗಳಿಗೆ ಹ್ಯಾಮ್ ಲೈಸೆನ್ಸ್ ಪಡೆಯುವ ಬಗ್ಗೆ ಹಾಗೂ ಹ್ಯಾಮ್ ಪರೀಕ್ಷೆಯನ್ನು ಎದುರಿಸುವ ಬಗ್ಗೆ ವಿವರಿಸಿದರು. ಶ್ರೀ ರಾಜೇಶ್ ಅವಲಕ್ಕಿ, ರೋವರ್ ಸ್ಕೌಟ್ ಲೀಡರ್, ಶಿವಮೊಗ್ಗ ಮತ್ತು ಶ್ರೀಮತಿ ಶುಭ, ರೇಂಜರ್ ಲೀಡರ್, ಬೆಂಗಳೂರು ಉತ್ತರ ಜಿಲ್ಲೆ ಇವರು ಸಹಾಯಕರಾಗಿದ್ದರು. ರೋವರಿಂಗ್ ಮತ್ತು ರೇಂಜರಿಂಗ್ ಬಗ್ಗೆ ಉಪಯುಕ್ತ ಮಾಹಿತಿ ಮತ್ತು ತರಬೇತಿಯನ್ನು ಶ್ರೀ ಡೇನಿಯಲ್ ಸುಕುಮಾರ್, ರೋವರ್ ಲೀಡರ್, ಶ್ರೀಮತಿ ಛಾಯ ಮತ್ತು ಶ್ರೀಮತಿ ಎಸ್.ಕೆ. ಪ್ರಭ, ಜಂಟಿ ರಾಜ್ಯ ಕಾರ್ಯದರ್ಶಿ(ಗೈ) ಇವರು ನೀಡಿದರು.

ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳಿಗೆ ಪ್ರೋತ್ಸಾಹದ ನುಡಿಗಳನ್ನು ತಿಳಿಸಿ ಯುವಕ-ಯುವತಿಯರ ಮುಂದಿನ ಕಾರ್ಯಕ್ರಮಗಳ ಬಗ್ಗೆ ಯೋಜನೆಗಳನ್ನು ತಿಳಿಸಿದರು. ಶ್ರೀ ಸಿ.ಎಸ್. ರೆಡ್ಡಿ, ಜಂಟಿ ರಾಜ್ಯ ಕಾರ್ಯದರ್ಶಿ(ಸ್ಕೌ), ಶ್ರೀ ಪ್ರಭುದೇವ ಜೆ. ಚಿಗಟೇರಿ, ರಾಜ್ಯ ಕೋಶಾಧಿಕಾರಿ ಶಿಬಿರಕ್ಕೆ ಭೇಟಿ ನೀಡಿದ್ದರು. ಶ್ರೀಮತಿ ಮಂಜುಳ. ಸಿ. ರಾಜ್ಯ ಸಂಘಟನಾ ಆಯುಕ್ತರು (ಗೈಡ್) ಶ್ರೀ ಪ್ರಭಾಕರ್ ಭಟ್, ಪ್ರಭಾರಿ ರಾಜ್ಯ ಸಂಘಟನಾ ಆಯುಕ್ತರು(ಸ್ಕೌಟ್) ಇವರುಗಳು ಶಿಬಿರದ ಉಸ್ತುವಾರಿ ವಹಿಸಿದ್ದರು.

**SOW A THOUGHT, YOU REAP ON ACTION**
**SOW AN ACTION, YOU REAP A HABIT**
**SOW A HABIT, YOUR REAP A CHARACTER**
**SOW A CHARACTER, YOU REAP A DESTINY**

# 38ನೇ ರಾಜ್ಯಮಟ್ಟದ ಕಬ್ ಮತ್ತು ಬುಲ್ ಬುಲ್ ಉತ್ಸವ

ದಿನಾಂಕ 25-02-2016 ರಿಂದ 29-02-2016 ರ ವರೆಗೆ ಕರ್ನಾಟಕ ರಾಜ್ಯ ಸಂಸ್ಥೆ ಹಾಗು ರಾಮನಗರ ಜಿಲ್ಲಾ ಸಂಸ್ಥೆಯ ಸಂಯುಕ್ತಾಶ್ರಯದಲ್ಲಿ ರಾಮನಗರದ ಜಾನಪದ ಲೋಕದಲ್ಲಿ 38ನೇ ರಾಜ್ಯಮಟ್ಟದ ಕಬ್ಸ್-ಬುಲ್‌ಬುಲ್ಸ್ ಉತ್ಸವವನ್ನು ಹಮ್ಮಿಕೊಳ್ಳಲಾಗಿತ್ತು.

ದಿನಾಂಕ 25-02-2016 ರಂದು ಬೆಳಗ್ಗೆ ಯಿಂದ ಮಧ್ಯಾಹ್ನದ ವರೆಗೆ ಕಬ್ಸ್-ಬುಲ್‌ಬುಲ್ಸ್‌ಗೆ ನೋಂದಣಿ ಮಾಡಲಾಯಿತು. 341 ಕಬ್ಸ್, 46 ಕಬ್ ಶಿಕ್ಷಕರು-ಶಿಕ್ಷಕಿಯರು, 366 ಬುಲ್‌ಬುಲ್, 48 ಫ್ಲಾಕ್ ಲೀಡರ್‌ಗಳು ಭಾಗವಹಿಸಿದ್ದರು. ಕಬ್ ವಿಭಾಗಕ್ಕೆ ಶ್ರೀ ವಿ.ಎಂ. ನಾರಾಯಣಸ್ವಾಮಿ ಮತ್ತು ಬುಲ್‌ಬುಲ್ ವಿಭಾಗಕ್ಕೆ ಶ್ರೀ ಅಸುಂತಾ ಡಿ.ಸೋಜಾ, ಮಂಗಳೂರು ಇವರುಗಳು ನಾಯಕತ್ವ ವಹಿಸಿದ್ದರು.

ಶ್ರೀ ಡಿ.ಕೆ. ಶಿವಕುಮಾರ್, ಮಾನ್ಯ ಇಂಧನ ಸಚಿವರು ಹಾಗು ರಾಮನಗರ ಜಿಲ್ಲಾ ಉಸ್ತುವಾರಿ ಸಚಿವರ ನೇತೃತ್ವದಲ್ಲಿ ಧ್ವಜಾರೋಹಣ ಮಾಡುವುದರ ಮೂಲಕ ಉತ್ಸವಕ್ಕೆ ಚಾಲನೆ ನೀಡಲಾಯಿತು. ಉದ್ಘಾಟನಾ ಸಮಾರಂಭವನ್ನು ಶ್ರೀಶ್ರೀಶ್ರೀ ಅನ್ನದಾನೇಶ್ವರ ಸ್ವಾಮೀಜಿಯವರು ಅಂಧರ ಶಾಲೆ ಅರ್ಚಕರ ಹಳ್ಳಿ ರಾಮನಗರ ಇವರ ದಿವ್ಯ ಸಾನಿಧ್ಯದಲ್ಲಿ ಪ್ರಾರಂಭಿಸಲಾಯಿತು. ಶ್ರೀ ಡಿ.ಕೆ. ಶಿವಕುಮಾರ್, ಇವರಿಂದ ದೀಪವನ್ನು ಬೆಳಗಿಸುವ ಮೂಲಕ ಉದ್ಘಾಟನೆ ನೆರವೇರಿಸಲಾಯಿತು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಉಪಾಧ್ಯಕ್ಷರು. ಭಾರತ್ ಸ್ಕೌಟ್ಸ್ -ಗೈಡ್ಸ್ ಸಂಸ್ಥೆ ಕರ್ನಾಟಕ, ವಹಿಸಿದ್ದರು. ಶ್ರೀಮತಿ ಸುಮಂಗಲ ವಿ. ಉಪನಿರ್ದೇಶಕರು (ಆಡಳಿತ) ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾ.ಸ್ಕೌ.-ಗೈ. ರಾಮನಗರ ಜಿಲ್ಲೆ ಇವರು ಎಲ್ಲರಿಗೂ ಸ್ವಾಗತವನ್ನು ಕೋರಿದರು. ಶ್ರೀ ಮುನಿಕೆಂಪೆಗೌಡ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ರೇಖಾ, ಜಿಲ್ಲಾ ಆಯುಕ್ತರು (ಗೈಡ್ಸ್,) ರಾಮನಗರ ಇವರು ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ರಾಜ್ಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು, ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿ ವರ್ಗದವರು, ಜಾನಪದ ಲೋಕದ ಅಧಿಕಾರಿ ವರ್ಗದವರು ಜಿಲ್ಲಾ ಪಂಚಾಯ್ತಿ, ತಾಲೂಕು ಪಂಚಾಯ್ತಿ ನಗರ ಸಭೆ, ಆರಕ್ಷಕ ಠಾಣೆ ರಾಮನಗರ, ಆರೋಗ್ಯ ಇಲಾಖೆ, ಕೆ.ಎಂ.ಎಫ್. ಈ ಎಲ್ಲಾ ಇಲಾಖಾ ಅಧಿಕಾರಿ ವರ್ಗದವರು ಸಮಾರಂಭದಲ್ಲಿ ಉಪಸ್ಥಿತರಿದ್ದರು.

ಉದ್ಘಾಟನೆ ನೆರವೇರಿಸಿದ ಸಚಿವರು ತಮ್ಮ ನುಡಿಗಳಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ರಾಜ್ಯಮಟ್ಟದ ಕಬ್ಸ್-ಬುಲ್‌ಬುಲ್ಸ್ ಉತ್ಸವವನ್ನು ಆಯೋಜಿಸಿದ ಈ ದಿನ ಜಿಲ್ಲೆಯ ಅವಿಸ್ಮರಣೀಯ ದಿನಗಳಲ್ಲಿ ಒಂದು. ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಅಭಿವೃದ್ಧಿಗೆ ರಾಜ್ಯ ಸರ್ಕಾರ ಅನುದಾನವನ್ನು ಬಿಡುಗಡೆ ಮಾಡಿದೆ ಎಂದು ತಿಳಿಸಿದರು. ನಂತರ ಶ್ರೀಶ್ರೀಶ್ರೀ ಅನ್ನದಾನೇಶ್ವರ ಸ್ವಾಮೀಜಿಯವರು ಎಲ್ಲರನ್ನು ಆಶೀರ್ವದಿಸಿದರು.

ಶ್ರೀ ಶಿವನಂಜಪ್ಪ, ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ರಾಮನಗರ ಇವರು ವಂದಿಸಿದರು. ನಂತರ ಸಂಜೆ ಸ್ಥಳೀಯ ರಾಮನಗರ ಜಿಲ್ಲೆಯ ವಿವಿದ ಶಾಲೆಯ ಮಕ್ಕಳಿಂದ ಏರ್ಪಡಿಸಲಾಗಿದ್ದ ಪ್ರತಿಭಾ ಪ್ರದರ್ಶನವನ್ನು ಶ್ರೀ ಶಿವಲಿಂಗಪ್ರಸಾದ್, ಅಧ್ಯಕ್ಷರು, ವಿಭೂತಿಕೆರೆ ಗ್ರಾಮಪಂಚಾಯ್ತಿ ಇವರು ಉದ್ಘಾಟಿಸಿದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಮಲ್ಲಿಕಾರ್ಜುನ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಚೆನ್ನಪಟ್ಟಣ ತಾಲ್ಲೂಕು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಪದಮ್ ಚಂದ್ ಜೈನ್, ಅಧ್ಯಕ್ಷರು ಸ್ಥಳೀಯ ಸಂಸ್ಥೆ ಭಾ.ಸ್ಕೌ.-ಗೈ. ರಾಮನಗರ ಭಾಗವಹಿಸಿದ್ದರು. ಸ್ಥಳೀಯ ಪ್ರತಿಭಾ ಪ್ರದರ್ಶನದಲ್ಲಿ ಹಾರೋಹಳ್ಳಿ ಪ್ರಗತಿಶಾಲೆಯ ಮಕ್ಕಳು ಮನೋರಂಜನಾ ಕಾರ್ಯಕ್ರಮ ಪ್ರದರ್ಶನ ನೀಡಿದರು.

ದಿನಾಂಕ 26-02-2016 ರಂದು ಬೆಳಗ್ಗೆ ರಾಮನಗರ ಪ್ರಮುಖ ಬೀದಿಗಳಲ್ಲಿ ಪಥಸಂಚಲನ ಕಾರ್ಯಕ್ರಮವನ್ನು ಏರ್ಪಡಿಸಲಾಯಿತು. ಪಥ ಸಂಚಲನದ ಉದ್ಘಾಟನೆಯನ್ನು ಡಾ॥ ಚಂದ್ರಗುಪ್ತ, ಐ.ಪಿ.ಎಸ್., ಪೋಲೀಸ್ ಅಧೀಕ್ಷಕರು, ಶ್ರೀ ಅನಿಲ್ ಕುಮಾರ್, ವೃತ್ತ - ನಿರೀಕ್ಷಕರು ಹಸಿರು ನಿಶಾನೆ ತೋರಿಸುವುದರ ಮೂಲಕ ನೆರವೇರಿಸಿದರು.

ಶ್ರೀಪದಮ್ ಚಂದ್ ಜೈನ್ ರವರು ಕುಡಿಯುವ ನೀರು, ಬಿಸ್ಕತ್ ಹಾಗೂ ಹಣ್ಣುಗಳನ್ನು ವಿತರಿಸಿದರು.

ಸಂಜೆ ಕಲರವ/ರೆಡ್ ರೋಸ್ ಕಾರ್ಯಕ್ರಮವನ್ನು ಶ್ರೀ ಡಿ. ಶಿವಕುಮಾರ್, ಕ್ಷೇತ್ರ ಶಿಕ್ಷಣಾಧಿಕಾರಿಗಳು ಕನಕಪುರ ಇವರು ಉದ್ಘಾಟಿಸಿದರು. ಎಲ್ಲಾ ಜಿಲ್ಲೆಗಳಿಂದ ಬಂದಂತಹ ಕಬ್ಸ್ ಮತ್ತು ಬುಲ್‌ಬುಲ್‌ಗಳು ಮನರಂಜನಾ ಕಾರ್ಯಕ್ರಮವನ್ನು ನೀಡಿದರು.

ದಿನಾಂಕ 27-02-2016 ರಂದು ಗುಂಪುಗಳಲ್ಲಿ ಚಟುವಟಿಕೆಗಳಲ್ಲಿ ಸ್ಕೌಟ್ಸ್-ಗೈಡ್ಸ್ ನಿರತರಾದರು. ನಂತರ ಶ್ರೀ ವಿಕ್ಟರ್, ಉಪನಿರ್ದೇಶಕರು (ಅಭಿವೃದ್ಧಿ) ಡೈಯಟ್ ರಾಮನಗರ ಇವರು ವಸ್ತು ಪ್ರದರ್ಶನ ಉದ್ಘಾಟಿಸಿ ಸ್ಕೌಟ್ಸ್-ಗೈಡ್ಸ್ ಮಾಡಿದ ಕರಕುಶಲತೆಯನ್ನು ನೋಡಿ ಮೆಚ್ಚಿ ಪ್ರಶಂಸೆಯನ್ನು ವ್ಯಕ್ತಪಡಿಸಿದರು. ಕಾರ್ಯಕ್ರಮದಲ್ಲಿ ಶ್ರೀ ಲೋಕೇಶ್, ನಿಸರ್ಗ ನರ್ಸರಿ ಚೆನ್ನಪಟ್ಟಣ ಮುಖ್ಯ ಅತಿಥಿಗಳಾಗಿ ಉಪಸ್ಥಿತರಿದ್ದರು.

ಸಂಜೆ ಜಾನಪದ ಜಾತ್ರೆಯನ್ನು ಶ್ರೀ ಗೊ.ರು. ಚನ್ನಬಸಪ್ಪ, ಅಧ್ಯಕ್ಷರು ಪ್ರಕಟಣಾ ಸಮಿತಿ, ಭಾ.ಸ್ಕೌ.-ಗೈ. ಹಾಗೂ ಜಾನಪದ ತಜ್ಞರು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಮಕ್ಕಳಿಗೆ ಗ್ರಾಮೀಣ ಭಾಷೆಯ ಜಾನಪದ ನುಡಿಗಳನ್ನು ಮನದಟ್ಟು ಆಗುವಂತೆ ತಿಳಿಸಿದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಂ.ಎ. ಖಾಲಿದ್, ರಾಜ್ಯ ಆಯುಕ್ತರು (ಸ್ಕೌ) ವಹಿಸಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಶುಭ ಹಾರೈಸಿದರು. ಸಮಾರಂಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಕಾರ್ಯದರ್ಶಿಗಳಾದ ಶ್ರೀ ಸಿದ್ಧಯ್ಯ ಭಾ.ಆ.ಸೇ.(ನಿವೃತ್ತ) ಶ್ರೀ ಕೆ.ಎಸ್. ಮಂಜುನಾಥ್ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ರಾಮನಗರ, ರಾಜ್ಯ ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು, ಶ್ರೀಮತಿ ಸುಮಂಗಲ ಡಿ.ಡಿ.ಪಿ.ಐ. ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು. ಶ್ರೀ ಇಕ್ಬಾಲ್ ಹುಸೇನ್ ಮಾಜಿ ಅಧ್ಯಕ್ಷರು ಜಿಲ್ಲಾ ಪಂಚಾಯತು ರಾಮನಗರ ಇವರು ಉತ್ಸವಕ್ಕೆ ಆಗಮಿಸಿದ ಎಲ್ಲಾ ಸ್ಕೌಟ್-ಗೈಡ್‌ಗಳಿಗೆ ಒಂದು ಬ್ಯಾಗನ್ನು ಕೊಡುಗೆಯಾಗಿ ನೀಡಿದರು. ಜೊತೆಗೆ ಜಿಲ್ಲಾ ಸಂಸ್ಥೆ ರಾಮನಗರ ವತಿಯಿಂದ ಪ್ರತಿ ಮಕ್ಕಳಿಗೆ 'ಚೆಂದದ ಚೆನ್ನಪಟ್ಟಣದ' ಗೊಂಬೆಗಳನ್ನು ಹಾಗು ಪುಸ್ತಕಗಳನ್ನು ನೆನಪಿನ ಕಾಣಿಕೆಯಾಗಿ ನೀಡಲಾಯಿತು.

ಶ್ರೀ ರಾಜ್‌ಭಟ್, ಸ್ಕೌಟ್ ಮಾಸ್ಟರ್ ಮೈಸೂರು ಇವರು ಜಾದೂವನ್ನು ಪ್ರದರ್ಶಿಸುವುದರ ಮೂಲಕ ಎಲ್ಲಾ ಸ್ಕೌಟ್-ಗೈಡ್‌ಗಳನ್ನು ರಂಜಿಸಿದರು. ನಂತರ ಜಿಲ್ಲಾವಾರು ಜಾನಪದ ಕಾರ್ಯಕ್ರಮದ ಪ್ರದರ್ಶನವನ್ನು ನೀಡಲಾಯಿತು.

ದಿನಾಂಕ 28-02-2016 ರಂದು ಕಬ್ಸ್-ಬುಲ್‌ಬುಲ್‌ಗಳಿಗೆ 'ಫನ್ ಗೇಮ್ಸ್' ನ್ನು ಆಯೋಜಿಸಲಾಯಿತು. ಚಟುವಟಿಕೆಯನ್ನು ರಾಜ್ಯ ಸಂಸ್ಥೆಯ ಎಲ್ಲಾ ಸ್ಕೌಟ್ ಗೈಡ್ ಪದಾಧಿಕಾರಿಗಳು ಉದ್ಘಾಟಿಸಿದರು. ಈ ಆಟಗಳ ನಾಯಕತ್ವವನ್ನು ಶ್ರೀಮತಿ ರೇವತಿ ಎಲ್.ಟಿ. (ಬು) ರವರು ವಹಿಸಿದ್ದರು. ಮಧ್ಯಾಹ್ನ 'ಸಮಾರೋಪ ಸಮಾರಂಭ' ನೆರವೇರಿಸಲಾಯಿತು. ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಕೆ.ಎಸ್. ಸತ್ಯಮೂರ್ತಿ ಭಾ.ಆ.ಸೇ., ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಅತಿಥಿಗಳಾಗಿ ಭಾಗವಹಿಸಿದ್ದು, ಸಮಾರೋಪ ಭಾಷಣ ಮಾಡಿದರು. ಶ್ರೀ ಸಿ.ಎಂ. ಲಿಂಗಪ್ಪ ಮಾಜಿ ಶಾಸಕರು, ರಾಮನಗರ, ಶ್ರೀ ಕೆ. ರಾಜು, ಮಾಜಿ ಶಾಸಕರು, ರಾಮನಗರ, ರಾಜ್ಯ ಪದಾಧಿಕಾರಿಗಳು ಹಾಗು ಜಿಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಸಂಜೆ 'ಭವ್ಯ ಶಿಬಿರಾಗ್ನಿ' ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ರಾಜ್ಯದ ವಿವಿಧ ಜಿಲ್ಲೆಗಳಿಂದ ಆಗಮಿಸಿದಂತಹ ಕಬ್ ಮಾಸ್ಟರ್, ಲೇಡಿ ಕಬ್ ಮಾಸ್ಟರ್, ಫ್ಲಾಕ್ ಲೀಡರ್ಸ್, ಸರ್ವೀಸ್ ರೋವರ್ಸ್, ಸರ್ವಿಸ್ ಸ್ಕೌಟ್ಸ್-ಗೈಡ್ಸ್ ಹಾಗು ರಾಜ್ಯ ಸಂಸ್ಥೆ ಸಿಬ್ಬಂದಿ ವರ್ಗದಿಂದ ಸಾಂಸ್ಕೃತಿಕ ಕಾರ್ಯಕ್ರಮವನ್ನು ನೀಡಲಾಯಿತು.

ದಿನಾಂಕ 29-02-2016 ರಂದು ಬೆಳಿಗ್ಗೆ 'ಸರ್ವಧರ್ಮ' ಪ್ರಾರ್ಥನೆ ಏರ್ಪಡಿಸಲಾಯಿತು. ಕಬ್ಸ್-ಬುಲ್‌ಬುಲ್ಸ್‌ಗಳಿಗಾಗಿ ಸಾಹಸಮಯ ಚಟುವಟಿಕೆ, ಕರಕುಶಲತೆ, ಸ್ನೇಹಮಯ ಆಟ ಹಾಗೂ ಇನ್ನೋವೇಟಿವ್ ಫಿಲಂ ಸಿಟಿಗೆ ಭೇಟಿ ಮುಂತಾದ ಚಟುವಟಿಕೆಗಳನ್ನು ಉತ್ಸವದ ಅಂಗವಾಗಿ ಹಮ್ಮಿಕೊಳ್ಳಲಾಗಿತ್ತು.

# ಗೈಡ್ಸ್ ವಿಹಾರದಲ್ಲಿ ಹಸಿರಿನೊಂದಿಗೆ ಪಿಸುಮಾತು



ಸ್ಕೌಟಿಂಗ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪಾವೆಲ್‌ರವರು 1909ರಲ್ಲಿ ಭಾರತದಲ್ಲಿ ಗರ್ಲ್‌ಗೈಡ್ಸ್ ಆರಂಭಿಸಿದರು. ಈ ಗೈಡ್ಸ್‌ನಲ್ಲಿ ಚಳವಳಿಯಿದೆ, ಕಾಳಜಿ ಇದೆ. ಯಾವುದೇ ಭೇದಭಾವ ಇಲ್ಲದೆ ಬಾಲಕಿಯರಿಗೆ ಹಾಗೂ ಮಹಿಳೆಯರಿಗೆ ಮಾನಸಿಕ ಧೈರ್ಯ ತುಂಬುವುದೇ ಇದರ ಉದ್ದೇಶ ಮುಕ್ತ ಶಿಕ್ಷಣ, ಸ್ವಯಂ ಸೇವಕ ಚಳವಳಿಗಳಿಗೆ ಬಿ.ಪಿ ಅವರು ಪ್ರಾಮುಖ್ಯತೆ ಕೊಟ್ಟಿದ್ದಾರೆ.

ಬಾಲಕಿಯರ ಸ್ಕೌಟಿಂಗ್ ಅಧಿಕೃತವಾಗಿ ಹುಟ್ಟಿದ್ದು 1909ರಲ್ಲಿ. ಇದು ಇಂದಿಗೂ ಬೆಳೆಯುತ್ತಲೇ ಇದೆ. 2009ರಲ್ಲಿ ಈ ಚಳವಳಿಯು ನೂರು ವರ್ಷ ಮುಗಿಸಿದೆ. ಲೇಡಿ ಬೇಡನ್ ಪಾವೆಲ್ ಇದರ ಅಸ್ತಿತ್ವ ಬಗ್ಗೆ ಆತ್ಮವಿಶ್ವಾಸದಿಂದ ಹೀಗೆಂದಿದ್ದಾರೆ. 'ಎಳೆಯರಿಗೆ ಬೇಕಾದುದ್ದನ್ನೆಲ್ಲಾ ಸ್ಕೌಟಿಂಗ್, ಗೈಡಿಂಗ್‌ಗಳು ನೀಡುತ್ತವೆ. ಎಳೆಯರು ಜಗತ್ತಿನಲ್ಲಿ ಇರುವವವರೆಗೂ ಈ ಚಳವಳಿಯು ಅಸ್ತಿತ್ವದಲ್ಲಿರುತ್ತದೆ' ಎಂಬ ನುಡಿಯು ತುಂಬಾ ಸ್ಪಷ್ಟವಾಗಿದೆ. ಒಂದು ಸಮೀಕ್ಷೆಯ ಪ್ರಕಾರ ನಮ್ಮ ರಾಜ್ಯದಲ್ಲಿ ತೊಂಬತ್ತು ಸಾವಿರ ಗೈಡ್‌ಗಳು ಇದ್ದಾರೆ. ಹೆಮ್ಮೆಯ ಸಂಗತಿ.

ಪ್ರತಿ ವರ್ಷದಂತೆ ಈ ವರ್ಷವೂ ನಾವೆಲ್ಲಾ ಸೇರಿ ಹೊರ ಸಂಚಾರಕ್ಕೆ ಪಾಂಡವರ ಹೊಳೆ ಮತ್ತು ಬಕ್ಕಳ ಗಾರ್ಡನ್‌ಗೆ ಹೋದೆವು. ಅಲ್ಲಿ ನಮಗೆ ಆಟದ ಜೊತೆ ಶಿಸ್ತು ಸಂಯಮವನ್ನು ಹೇಳಿಕೊಟ್ಟರು. ಅಲ್ಲಿ ಮೋಜಿನಷ್ಟೇ ಕಲಿಕೆಗೂ ಪ್ರಾಮುಖ್ಯತೆ ಇದೆ.  ಈ ವಿಷಯಗಳೇ ನನಗೆ ಈ ಗೈಡ್ ಇಷ್ಟವಾಗಲು ಕಾರಣ.

ಸ್ಕೌಟ್ಸ್ ಮತ್ತು ಗೈಡ್ಸ್ ತಂಡದವರಾದ ನಾವೆಲ್ಲ ಸಮವಸ್ತ್ರ ಧರಿಸಿ ಠಾಕೂಠೀಕಾಗಿ ಎಂಟು ಗಂಟೆಗೆಲ್ಲ ಮಾಸ್ಟರ್ ಅವರ ಆಣತಿಯಂತೆ ಒಂದೆಡೆ ಸೇರಿದ್ದೆವು. ನಮ್ಮ ಸಮವಸ್ತ್ರದೊಂದಿಗೆ ಬಂದಿದ್ದೆವು. ಅಲ್ಲಿನ ಆಟಪಾಠಗಳ ನಂತರ ಪಾಂಡವರ ಹೊಳೆಗೆ ಹೋದೆವು. ಸ್ಕೌಟ್ಸ್ ಮತ್ತು ಗೈಡ್ಸ್  ಧ್ವಜ ಹಾರಿಸಿ ನಮ್ಮ ಹೈಕಿಂಗ್ ಪ್ರಾರಂಭಿಸಿದೆವು. ನಮಗೆಲ್ಲರಿಗೂ ಕಿಚನ್‌ಟಾಸ್ಕ್ ಇತ್ತು. ಅದಕ್ಕೆ ಒಂದೂವರೆ ಗಂಟೆಯ ಕಾಲಾವಕಾಶವಿತ್ತು. ಎಲ್ಲರಿಗೂ ಹೊಸದು ಏನು ಮಾಡಬೇಕೆಂದು ತಿಳಿಯದಾಗಿತ್ತು. ಆದರೂ ಏನೆಲ್ಲ ತಲೆ ಉಪಯೋಗಿಸಿ ಪಾನೀಪುರಿ, ಖರ್ಜೂರದ ಲಾಡು, ಮಸಾಲೆಯ ಮಜ್ಜಿಗೆ ಹಾಗೂ ಬರ್ಗರ್‌ಗಳನ್ನು ಮಾಡಿದೆವು. ಅದು ಚೆನ್ನಾಗಿತ್ತೋ ಇಲ್ವೋ ಗೊತ್ತಿಲ್ಲ.

ಸಂಜೆ ವೇಳೆಯಲ್ಲಿ ಸಾಂಸ್ಕೃತಿಕ ಕಾರ್ಯಕ್ರಮವಿತ್ತು. ಅದರಲ್ಲಿ ನಮ್ಮ ತಂಡದವರ ಪಾಲಿಗೆ ಬಂದಿದ್ದ ಜನಪದ ನೃತ್ಯ ಮಾಡಿದೆವು. ಭಾಗ್ಯಶ್ರೀ ಎಂಬ 9ನೇ ತರಗತಿಯ ವಿದ್ಯಾರ್ಥಿನಿ ರಾಜ್ಯ ಪುರಸ್ಕಾರಕ್ಕೆ ಭಾಜನಳಾಗಿದ್ದರಿಂದ ಅವಳಿಗೆ ಸನ್ಮಾನ ನಡೆಯಿತು. ಅದು ನಮಗೆ ಸ್ಫೂರ್ತಿಯಾಯಿತು. ಈ ಎಲ್ಲಾ ಸಾಂಸ್ಕೃತಿಕ ಕಾರ್ಯಕ್ರಮದ ನಂತರ ನಮ್ಮೊಂದಿಗೆ ಬಂದಿದ್ದ ಶಿಕ್ಷಕರಿಗಾಗಿ ಸ್ಪರ್ಧೆಗಳನ್ನು ಆಯೋಜಿಸಲಾಗಿತ್ತು. ಅದರಲ್ಲೂ ಗಂಡು ಮಕ್ಕಳಿಗೆ ಕಣ್ಣು ಮುಚ್ಚಿಸಿ ಶಿಕ್ಷಕರು ಮೇಕಪ್ ಮಾಡಿದಾಗ ನಗು ತಡೆಯಲಾಗಲಿಲ್ಲ.

ಪಾಂಡವರ ಹೊಳೆಯಿಂದ ಹೊರಟು ಬಕ್ಕಳ ಗಾರ್ಡನ್‌ಗೆ ಹೋದೆವು. ಅಲ್ಲಿ ವಿವಿಧ ಹೂವುಗಳು, ಸಸ್ಯ ಸಂಪತ್ತುಗಳನ್ನು ನೋಡಿ ಆನಂದವಾಯಿತು. ಹಸಿರಿನೊಡನೆ ಬಣ್ಣದ ಹೂವುಗಳು ಕಂಗೊಳಿಸುತ್ತಿದ್ದವು. ವಿವಿಧ ಜಾತಿಯ ಮರಗಳನ್ನು ನೋಡಿ ಹೇಳಲಾರದಷ್ಟು ಸಂತೋಷವಾಯಿತು. ಆ ವೃಕ್ಷಸಿರಿಯ ನಡುವೆಯೇ ನಾವೆಲಾ ಸೇರಿ ಕಣ್ಣಾಮುಚ್ಚಾಲೆ, ಜೋಕಾಲಿ ಹಾಗೂ ಇನ್ನಿತರ ಆಟಗಳನ್ನು ಆಡಿದೆವು.

ಮಾಸ್ಟರ್ ಅವರ ವಿಷಲ್ ಧ್ವನಿಯಿಂದ ಎಲ್ಲರು ಟೆಂಪೋ ಕಡೆ ಓಡಿದೆವು. ಅಂತ್ಯಾಕ್ಷರಿಯ ಹಾಡುಗಳೂ ಆರಂಭವಾಗಿ ನಮ್ಮ ಧ್ವನಿ ರಸ್ತೆಯನ್ನು ಭೇದಿಸಿತ್ತು. ಹಾಗೇ ಹಾಡುತ್ತಾ ಮನೆ ತಲುಪಿದೆವು.

ಹೈಕಿಂಗ್‌ಗೆ ಹೋದ ಆ ಅನುಭವ ಅತ್ಯದ್ಭುತವಾಗಿತ್ತು. ಅಲ್ಲಿ ಮಾಡಿದ ಆಟಗಳು, ತುಂಟಾಟಗಳು ಮನಸ್ಸಿಗೆ ಮುದ ನೀಡಿತ್ತು. ನನ್ನ ಜೀವನದಲ್ಲಿ ಇದೊಂದು ಮಧುರ ಅನುಭವ. ಸ್ಟೂಡೆಂಟ್ಸ್ ಕೇವಲ ಓದು ಬರಹವೇ ಅಲ್ಲದೆ ಇನ್ನಿತರ ಚಟುವಟಿಕೆಗಳು ಭಾಗಿಯಾಗಬೇಕು ಅಂತಹ ಮನೋಭಾವ ಬೆಳೆಸಿಕೊಳ್ಳಬೇಕು.

**ಲೇಖಕರು:– ಸುಮೇಧಾ.ವಿ. ಹಿರೇಮಠ**

6ನೇ ತರಗತಿ, ಲಯನ್ಸ್ ಪ್ರಾಥಮಿಕ ಶಾಲೆ, ಶಿರಸಿ (ಉತ್ತರ ಕನ್ನಡ)

(ಕೃಪೆ:– ದಿನಾಂಕ 20.03.2016 ಕನ್ನಡಪ್ರಭ ಪತ್ರಿಕೆಯ "ಭಾನುಪ್ರಭ" ಮಕ್ಕಳಪುಟದಲ್ಲಿ ಈ ಲೇಖನ ಪ್ರಕಟವಾಗಿದೆ. ಕುಮಾರಿ ಸುಮೇಧಾ.ವಿ.ಹಿರೇಮಠ ಅವರಿಗೆ ಅಭಿನಂದನೆಗಳು).

# ಜಿಲ್ಲಾ ವಾರ್ತೆಗಳು

## ಬೆಳಗಾವಿ

ದಿನಾಂಕ : 10-01-2016 ರಂದು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಬೆಳಗಾವಿ ಜಿಲ್ಲಾ ಸಂಸ್ಥೆಗೆ ಬೇಟಿ ನೀಡಿ ಸ್ಕೌಟ್-ಗೈಡ್ ಮೂಲ ತರಬೇತಿ ಶಿಬಿರದ ಸಮಾರಂಭದಲ್ಲಿ ಪಾಲ್ಗೊಂಡು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿದರು. ಸಮಾರಂಭದಲ್ಲಿ ಜಿಲ್ಲಾ ಕೋಶಾಧಿಕಾರಿಗಳಾದ ಶ್ರೀ ಎಸ್.ಸಿ. ಕಟ್ಟಿಮನಿ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ ತರಬೇತಿ ನಾಯಕರುಗಳಾದ ಶ್ರೀ ಬಾಬುರಾವ್ ನಿಂಬೂರೆ ಶ್ರೀ ಎನ್. ಕೃಷ್ಣಮೂರ್ತಿ, ಶ್ರೀಮತಿ ಬಿ.ಡಿ. ಶಾಂತಾ, ಶ್ರೀಮತಿ ಜಯಶ್ರೀ ಹಾಗೂ ಶಿಬಿರಾರ್ಥಿಗಳು ಉಪಸ್ಥಿತರಿದ್ದರು.

ನಂತರ ಸಾಯಂಕಾಲ ರಾಜ್ಯ ಮುಖ್ಯ ಆಯುಕ್ತರು ಶ್ರೀ ಚಿಕ್ಕೋಡಿ ತಾಲೂಕಿನ ಸುಕ್ಷೇತ್ರ ಯಡೂರುದಲ್ಲಿ ನಡೆದ ಸ್ಕೌಟ್-ಗೈಡ್ ಮೂಲ ತರಬೇತಿ ಶಿಬಿರಕ್ಕೆ ಬೇಟಿನೀಡಿ ಶಿಬಿರದ ಸಮಾರೋಪ ಸಮಾರಂಭದಲ್ಲಿ ಪಾಲ್ಗೊಂಡು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತ ತರಬೇತಿ ಪಡೆದ ಶಿಬಿರಾರ್ಥಿಗಳು ತಂಡಗಳನ್ನು ಪ್ರಾರಂಭಿಸಿ ಉತ್ತಮ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ತಯಾರಿಸಬೇಕೆಂದು ಕರೆ ನೀಡಿದರು. ಸಮಾರಂಭದಲ್ಲಿ ಚಿಕ್ಕೋಡಿ ಶಾಸಕರಾದ ಶ್ರೀ ಗಣೇಶ ಪ್ರಕಾಶ ಹುಕ್ಕೇರಿ, ಯಡೂರ ಗ್ರಾಂ.ಪಂ. ಅಧ್ಯಕ್ಷರಾದ ಶ್ರೀ ಅಮರ ಬೋರಗಾಂವ, ತಾ. ಪಂ. ಸದಸ್ಯರಾದ ಶ್ರೀ ಅನಿಲ ಪಾಟೀಲ, ಉಪನಿರ್ದೇಶಕರಾದ ಶ್ರೀ ಜೆ.ಬಿ. ಮನ್ನಿಕೇರಿ, ಹುಕ್ಕೇರಿ ಬಿ.ಇ.ಓ. ರಾದ ಶ್ರೀಮತಿ ಪಿ.ಬಿ. ಪಾಟೀಲ, ಶ್ರೀ ಎಂ.ಎನ್. ದಂಡಿನ, ಬಿ.ಇ.ಓ. ನಿಪ್ಪಾಣಿ, ತರಬೇತಿ ನಾಯಕರಾದ ಶ್ರೀ ಬಿ.ಡಿ. ಫರ್ನಾಂಡಿಸ್, ಶ್ರೀಮತಿ ಸಿ. ಸಂಧ್ಯಾರಾಣಿ, ಶ್ರೀಮತಿ ಕೃಪಾ. ವಿಜಯ, ಶ್ರೀಮತಿ ವಿಮಲಾಬಾಯಿ ಚಿಕ್ಕೋಡಿ ಬಿ.ಇ.ಓ., ಶ್ರೀ ಬಿ.ಎ. ಮೇಕನ ಮರಡಿ ಪಿ.ಇ.ಓ., ಶ್ರೀ ಎಂ.ಎಸ್. ಪಾರ್ಥನಹಳ್ಳಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಸ್.ಜಿ. ಪಾಟೀಲ ಹಾಗು ಪದಾಧಿಕಾರಿಗಳು ಉಪಸ್ಥಿತರಿದ್ದರು.

* ಇತ್ತೀಚೆಗೆ ಕಲ್ಪವೃಕ್ಷ ಮಾದರಿ ಪ್ರೌಢಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು "ಅನ್ನಪೂರ್ಣ" ಕಾರ್ಯಕ್ರಮ ಅಂಗವಾಗಿ ಹಲವಾರು ಹಳ್ಳಿಗಳಿಗೆ ಹೋಗಿ ಪ್ರತಿ ಮನೆಯಿಂದ ಅಕ್ಕಿ ಸಂಗ್ರಹಿಸಿ, ಸಂಗ್ರಹವಾದ ಅಕ್ಕಿಯನ್ನು ಬೈಲಹೊಂಗಲದ ಕಾರ್ಮೆಲ್ ವಿಶೇಷ ಚೇತನ ಮಕ್ಕಳ ಶಾಲೆಗೆ ನೀಡಿದರು. ಸ್ಕೌಟ್ಸ್-ಗೈಡ್ಸ್‌ಗಳು ಶಾಲಾ ಮಕ್ಕಳ ಜೊತೆ ಬೆರೆತು ಕೆಲವು ಮನೋರಂಜನಾ ಚಟುವಟಿಕೆಗಳನ್ನು ನಡೆಸಿ, ಅವರ ಶಾಲೆಗೆ ಸಂಗ್ರಹವಾದ ಅಕ್ಕಿಯನ್ನು ವಿತರಿಸುವ ಒಂದು ಒಳ್ಳೆಯ ಸಮಾಜಸೇವೆಯ ಕಾರ್ಯಕ್ರಮವನ್ನು ನಡೆಸಿದರು. ಸದರಿ ಕಾರ್ಯಕ್ರಮದಲ್ಲಿ ಗೈಡ್ ಕ್ಯಾಪ್ಟನ್‌ಗಳಾದ ಶ್ರೀಮತಿ ವಿದ್ಯಾ. ಬಿ. ಬರಗಾಲಿ. ಶ್ರೀಮತಿ ಮಂಜುಳಾ ಪಾಟೀಲ ಹಾಗು ಶಾಲೆಯ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು.

* ದಿನಾಂಕ 05-02-2016 ರಂದು ಅಥಣಿ ತಾಲೂಕಿನ ಎ.ಕೆ. ಪ್ರೌಢಶಾಲೆಯಲ್ಲಿ ಸ್ಕೌಟ್-ಗೈಡ್‌ಗಳ ಮೂಲ ತರಬೇತಿ ಕುರಿತು ಒಂದು ದಿನದ "ಸ್ಕೌಟಿಂಗ್ ಪರಿಚಯಾತ್ಮಕ" ಮಾಹಿತಿ ಶಿಬಿರವು ಜರುಗಿತು. ಶಿಬಿರದ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಎಂ.ಬಿ. ಭಜಂತ್ರಿ ವಹಿಸಿದ್ದರು. ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎ.ಎಂ. ಬಡಿಗೇರಿ, ಶಿಕ್ಷಣ ಸಂಯೋಜಕರಾದ ಶ್ರೀ ಸಾಂಗೋಲು, ಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಎ.ಎಚ್. ಜಹಗೀರದಾರ ಉಪಸ್ಥಿತರಿದ್ದರು. ಕಾರ್ಯದರ್ಶಿ ಶ್ರೀ ಎಸ್.ಎ. ವಾಲಿ ಕಾರ್ಯಕ್ರಮ ನಿರೂಪಿಸಿ ವಂದಿಸಿದರು.

* ದಿನಾಂಕ 09-02-2016 ರಂದು ಕಾಗವಾಡದ ಸ.ಕ.ಹಿ. ಪ್ರಾ. ಶಾಲೆಯಲ್ಲಿ ಸ್ಕೌಟ್-ಗೈಡ್ ಮೂಲ ತರಬೇತಿಯ ಒಂದು ದಿನದ ಸ್ಕೌಟಿಂಗ್ ಪರಿಚಯಾತ್ಮಕ ಮಾಹಿತಿ ಶಿಬಿರವು ಜರುಗಿತು. ಶಿಬಿರದ ಅಧ್ಯಕ್ಷತೆಯನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಡಾ॥ ಗುರುನಾಥ. ಹೂಗಾರ ವಹಿಸಿದ್ದರು. ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎ.ಎಸ್. ಶಿರತನಹಳ್ಳಿ, ಜಿಲ್ಲಾ ಸಂಘಟಕರಾದ ಶ್ರೀ ಎನ್.ಬಿ. ಗುಡಸಿ ಹಾಗು ದೈಹಿಕ ಶಿಕ್ಷಕರ ಸಂಘದ ತಾಲೂಕಾ ಅಧ್ಯಕ್ಷರು ಉಪಸ್ಥಿತರಿದ್ದರು. ಕಾರ್ಯದರ್ಶಿ ಶ್ರೀ ಎಂ.ಕೆ. ಕಾಂಬಳೆ ಇವರು ಕಾರ್ಯಕ್ರಮ ನಿರೂಪಿಸಿ ವಂದಿಸಿದರು.

* ದಿನಾಂಕ 17-02-2016 ರಿಂದ 23-02-2016 ರ ವರೆಗೆ ಅಥಣಿ ತಾಲೂಕಿನ ಸುಕ್ಷೇತ್ರ ರಾಮತೀರ್ಥದಲ್ಲಿ ಸ್ಕೌಟ್, ಗೈಡ್ ಮೂಲ ತರಬೇತಿ ಶಿಬಿರವು ಜರುಗಿತು. ಶಿಬಿರದ ನಾಯಕರಾಗಿ ಶ್ರೀ ಬಾಬುರಾವ ನಿಂಬೂರೆ, ಶ್ರೀ ಕೆ. ಜವರಯ್ಯ, ಶ್ರೀಮತಿ ವೈ.ಡಿ. ಪದ್ಮ ಇವರುಗಳು ಕಾರ್ಯ ನಿರ್ವಹಿಸಿದರು. ದಿನಾಂಕ 22-02-2016 ರಂದು ಬೇಡನ್ ಪೊವೆಲ್ಲರ ಜನ್ಮದಿನಾರಚರಣೆ ನಿಮಿತ್ತ ಹಮ್ಮಿಕೊಂಡ ಸಮಾರಂಭದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರು ಹಾಗೂ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಚಿಕ್ಕೋಡಿ ಆದ ಶ್ರೀ ಗಜಾನನ ಬಿ. ಮನ್ನಿಕೇರಿ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಬಿ.ಪಿ.ಯವರ ಭಾವಚಿತ್ರಕ್ಕೆ ಪೂಜೆಯನ್ನು ಸಲ್ಲಿಸಿದರು. ನಂತರ ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾರ್ಗದರ್ಶನದ ಮಾತುಗಳನ್ನು ಆಡಿದರು.

ಸಮಾರಂಭದಲ್ಲಿ ಅಥಣಿ, ಬಿ.ಇ.ಓ., ಶ್ರೀ ಎಂ.ಬಿ. ಬಡಿಗೇರ, ಕಾಗವಾಡ ಬಿ.ಇ.ಓ., ಡಾ॥ ಗುರುನಾಥ ಹೂಗಾರ, ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎ.ಎಸ್. ಶಿರತನಹಳ್ಳಿ, ತರಬೇತಿ ನಾಯಕರುಗಳು ಹಾಗು ಕ್ಷೇತ್ರದ ಮಹಾರಾಜರಾದ ಶ್ರೀ ತಾರಾಚಂದ ಮಹಾರಾಜರು ಶ್ರೀ ಬಾಹುರಾವ್ ಮಹಾರಾಜರು ಉಪಸ್ಥಿತರಿದ್ದರು. ಶ್ರೀ ಡಿ.ಬಿ. ಅತ್ತಾರ, ಜಿಲ್ಲಾ ಸಂಘಟಕ ನಿರೂಪಿಸಿದರು. ಶ್ರೀ ಎಸ್.ಎ. ವಾಲಿ ಸ್ವಾಗತಿಸಿದರು. ಶ್ರೀ ಆರ್. ಆರ್. ಅಲಕುಂಟೆ ವಂದಿಸಿದರು. ಶಿಬಿರದಲ್ಲಿ 72 ಸ್ಕೌಟರ್, 23 ಗೈಡರ್ ಭಾಗವಹಿಸಿದ್ದರು. ದಿನಾಂಕ 23-02-2016 ರಂದು ಬೆಳಿಗ್ಗೆ ಸರ್ವಧರ್ಮ ಪ್ರಾರ್ಥನೆಯನ್ನು ಏರ್ಪಡಿಸಲಾಯಿತು.

* ದಿನಾಂಕ 24-02-2016 ರಿಂದ 25-02-2016 ರ ವರೆಗೆ ಅಥಣಿಯ ಕೆ.ಎಲ್.ಇ. ಶಾಲೆಯ ಸ್ಕೌಟ್-ಗೈಡ್‌ಗಳಿಗೆ ಕಾರ್ಯಾಗಾರವನ್ನು ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ ವಿಭಾಗದ ನೇತೃತ್ವವನ್ನು ಶ್ರೀ ಡಿ.ಬಿ. ಅತ್ತಾರ ವಹಿಸಿದ್ದರು. ಎರಡು ದಿನ ಧ್ವಜಾರೋಹಣ ಕಾರ್ಯಕ್ರಮದಲ್ಲಿ ಪ್ರಾಂಶುಪಾಲರಾದ ಶ್ರೀ ಎಂ.ಎಸ್. ಹೀರೆಮಠ ಉಪಸ್ಥಿತರಿದ್ದರು.

* ದಿನಾಂಕ 25-02-2016 ರಂದು ಕೆ.ಎಲ್.ಇ. ಶಾಲೆಯಲ್ಲಿ ಲಾರ್ಡ್ ಬೆಡನ್ ಪೋವೆಲ್ ರವರ ಜನ್ಮದಿನಾಚರಣೆ ನಿಮಿತ್ತ ಬಿ.ಪಿ.ಯವರ ಭಾವಚಿತ್ರಕ್ಕೆ ಶಾಲೆಯ ಪ್ರಾಂಶುಪಾಲರಾದ ಶ್ರೀ ಎಂ.ಎಸ್. ಹಿರೇಮಠ ಇವರು ಪೂಜೆಯನ್ನು ಸಲ್ಲಿಸಿದರು.

## ಬೆಂಗಳೂರು ದಕ್ಷಿಣ

ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿಯಿಂದ ಮಕ್ಕಳಲ್ಲಿ ಸಂಕಷ್ಟಗಳನ್ನು ಸುಲಭವಾಗಿ ಎದುರಿಸಬಲ್ಲ ಕೌಶಲ್ಯ ವೃದ್ಧಿಯಾಗಿ ಆತ್ಮಸ್ಥೈರ್ಯ ಹೆಚ್ಚುತ್ತದೆ ಎಂದು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಡಿ.ಆರ್. ರಾಮಮೂರ್ತಿ ನುಡಿದರು. ಅವರು ಆನೇಕಲ್ಲಿನ ಇಂಡ್ಲವಾಡಿ ಕ್ರಾಸ್‌ನ ಸಾಯಿ ಸಿಟಿ ಇಂಟರ್ ನ್ಯಾಷನಲ್ ಶಾಲೆಯಲ್ಲಿ ನೂತನ ಸ್ಕೌಟ್, ಗೈಡ್ ಘಟಕಗಳನ್ನು ಉದ್ಘಾಟಿಸಿ ಮಾತನಾಡುತ್ತಿದ್ದರು.

ಬಾಲ್ಯದಿಂದಲೇ ಮಕ್ಕಳಿಗೆ ಶಿಸ್ತು ಮತ್ತು ಸೌಹಾರ್ಧತೆಗೆ ಹೆಚ್ಚಿನ ಆಧ್ಯತೆಯನ್ನು ನೀಡಬೇಕು. ಸ್ಕೌಟ್ಸ್-ಗೈಡ್ಸ್‌ನ ಚಟುವಟಿಕೆಗಳು ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾಗಿದೆ. ಎಂದು ನುಡಿದರು.

ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮಾತನಾಡಿ ಮಕ್ಕಳು ಮಾನಸಿಕವಾಗಿ, ದೈಹಿಕವಾಗಿ ಮತ್ತು ಸಾಮಾಜಿಕವಾಗಿ ಸದೃಢರಾಗಬೇಕು. ಹಾಗಾದಾಗ ಮಾತ್ರ ಅವರ ಮುಂದಿನ ಭವಿಷ್ಯ ಉಜ್ವಲವಾಗುತ್ತದೆ. ಅದಕ್ಕೆ ಪೂರಕವಾದ ಎಲ್ಲಾ ಚಟುವಟಿಕೆಗಳನ್ನು ಮತ್ತು ಅವಕಾಶಗಳನ್ನು ಸ್ಕೌಟ್ ಸಂಸ್ಥೆ ಒದಗಿಸುತ್ತದೆ. ಎಂದರು

ಶಾಲಾ ಆಡಳಿತ ಮಂಡಳಿ ಸದಸ್ಯರಾದ ಶ್ರೀ ನಾರಾಯಣ್ ಮಾತನಾಡಿ ವಿಶ್ವದೆಲ್ಲೆಡೆ ಹರಡಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಘಟಕಗಳನ್ನು ನಮ್ಮ ಶಾಲೆಯಲ್ಲಿ ಪ್ರಾರಂಭಿಸಲು ಹೆಮ್ಮೆಯಾಗುತ್ತಿದೆ. ಈ ಚಳುವಳಿಯಿಂದ ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಶಿಸ್ತು ಮತ್ತು ಸರ್ವತೋಮುಖ ಅಭಿವೃದ್ಧಿಗೆ ಪೂರಕವಾದ ಎಲ್ಲಾ ಕಲೆ ಮತ್ತು ಕೌಶಲ್ಯಗಳು ಸಿಗುತ್ತದೆ ಎಂದರು. ಇದೇ ಸಂದರ್ಭದಲ್ಲಿ ಸ್ಕೌಟ್ ಸಂಸ್ಥಾಪಕ ಬೇಡನ್ ಪೊವೆಲ್ ರವರ ಜನ್ಮದಿನಾಚರಣೆ ಮತ್ತು ವಿಶ್ವ ಸ್ಕೌಟ್ ದಿನಾಚರಣೆಯನ್ನು ಆಚರಿಸಲಾಯಿತು. ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಸಮನ್ವಯಾಧಿಕಾರಿ ಶ್ರೀ ಮುನಿವೆಂಕಟ ರಾಮಾಚಾರಿ, ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕ ಶ್ರೀ ಯಲ್ಲಪ್ಪ, ಶಿಕ್ಷಣ ಸಂಯೋಜಕ ಶ್ರೀ ವಿ. ಪ್ರಕಾಶ್, ಸಾಯಿಸಿಟಿ ಇಂಟರ್ ನ್ಯಾಷನಲ್ ಶಾಲಾ ಆಡಳಿತ ಮಂಡಳಿ ಸದಸ್ಯರಾದ ಶ್ರೀ ಅಭಿಷೇಕ್, ಪ್ರಾಂಶುಪಾಲರಾದ ಶ್ರೀಮತಿ ಆಶಾ, ಲೇಡಿ ಸ್ಕೌಟ್ ಮಾಸ್ಟರ್ ಶ್ರೀಮತಿ ಎಸ್. ಹೇಮಲತಾ, ಗೈಡ್ ಕ್ಯಾಪ್ಟನ್ ಶ್ರೀಮತಿ ಎಸ್. ಅಂಬಿಕಾ ಉಪಸ್ಥಿತರಿದ್ದರು.

* ದಿನಾಂಕ 27-02-2016 ರಂದು ಆರ್ಚರ್ಡ್ ಪಬ್ಲಿಕ್ ಶಾಲೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಘಟಕಗಳ ಉದ್ಘಾಟನಾ ಸಮಾರಂಭವನ್ನು ಹಮ್ಮಿಕೊಂಡಿದ್ದು, ಈ ಸಮಾರಂಭಕ್ಕೆ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಆಗಮಿಸಿ ಜ್ಯೋತಿ ಬೆಳಗುವುದರ ಮೂಲಕ ಸಮಾರಂಭವನ್ನು ಪ್ರಾರಂಭಿಸಿದರು. ಈ ಸಮಾರಂಭಕ್ಕೆ ಬೆಂಗಳೂರು ದಕ್ಷಿಣ ಜಿಲ್ಲೆಯ ಆಯುಕ್ತರಾದ ಶ್ರೀ ಪಿ. ಪಳನಿ, ಶ್ರೀ ಚಕ್ರವರ್ತಿ ಮತ್ತು ಅನಂತ್ ರವರು ಆಗಮಿಸಿದ್ದರು. ಶ್ರೀ ಪಿ.ಜಿ.ಆರ್. ಸಿಂಧ್ಯರವರು ಮಾತನಾಡುತ್ತಾ "ಶಿಕ್ಷಣವು ಒಂದು ನಿಧಿ ಇದ್ದಂತೆ. ಇದನ್ನು ಪಡೆದವರು ತನ್ನ ಬಡತನದಿಂದ ಮುಕ್ತಿಯನ್ನು ಪಡೆಯುತ್ತಾನೆಂದು ಹೇಳಿದರು. ಮುಂದುವರೆದ ಶಿಕ್ಷಕರೇ ನಮ್ಮ ಸಮಾಜದ ಸುಧಾರಕರು ಅವರು ಸ್ಕೌಟ್-ಗೈಡ್‌ಗಳಿಗೆ ಒಳ್ಳೆಯ ಮಾರ್ಗದರ್ಶನವನ್ನು ಕೊಡುವಂತವರಾಗಿರಬೇಕು ಹಾಗು ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಸಹಕರಿಸಬೇಕು ಎಂದು ಹೇಳಿದರು.

## Bengaluru North

Bangalore North District organized the 3rd Rover / Ranger Moot at Tamilnadu State Training Centre, Staley Park, Ottupattarai, Coonoor, Ooti from 25th to 28th February 2016. About 150 Rovers and Rangers drawn from various Colleges participated. Mr. A.M. Shankar, LT(R) and ASOC was the leader of the Camp. He was assisted by Mr. B.K. Sheshadri, HWB(R), District Secretary Mr. Daniel Sukumardas, Rover Leader, Sri Ganapathy, ALT(R) Sri Rangaswamy, Rover Leader. Smt. Shubha, Ranger Leader, Smt. Shanthakumari, Ranger Leader, Sri Vikas, Cub Master, Sri marshall Rover Leader.

* **Shivajinagar Local Association** organized "Thinking Day & Founders Day" in Stracey Memorial School on 22.22016 from 9.00 A.M to 2.30 P.M. The Cubs, Buibuls, Scouts & Guides numbering - 270 participated.

Mr. Kirbhanandhan, ADC(S) Principal & Secretary of Stracey Memorial School was the Chief Guest of the Celebration. Sri. T.S. Lucas, LT(S) & Vice-President of BS&G, Smt. Revathy. B,

LT(B) & ASC(G) of BS&G and Mrs. Manjula Rataida, Vice President & Mahila Mandal President of S.L.A were the Guests of Event. The following activities were conducted.

1. All Faith's Prayer
2. Sketches on Baden Powell (Scouts & Guides)
3. Drawing & Painting (Cubs & Bulbuls)

The Prizes were distributed for the winners by Sri. T.S. Lucas, Chairman of SLA.

The Programme was co-ordinate by Local Secretary Smt. C.V. Krupa Vijai, ALT(G).

## ಬೀದರ್

ದಿನಾಂಕ 06-02-2016 ರಂದು ಸಂತಪೂರದ ಹೋಲಿ ಕ್ರಾಸ್ ಪ್ರಾಥಮಿಕ ಶಾಲೆಯಲ್ಲಿ ಭಗತ್‌ಸಿಂಗ್ ಸ್ಕೌಟ್ ಟ್ರೂಪ್ ಮತ್ತು ಮದರ್ ತೆರೇಸಾ ಗೈಡ್ಸ್ ಕಂಪನಿ ಅಸ್ತಿತ್ವಕ್ಕೆ ಬಂದಿದೆ. ಈ ಘಟಕವನ್ನು ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಾಬುರಾವ ನಿಂಬೂರೆ ಉದ್ಘಾಟಿಸಿದರು. ಘಟಕ ಉದ್ಘಾಟನೆ ಮಾಡಿ ಮಾತನಾಡಿದ ಶ್ರೀ ಬಾಬುರಾವ ನಿಂಬೂರೆ ಅವರು ಸ್ಕೌಟ್ಸ್-ಗೈಡ್ಸ್ ಯಾವುದೇ ಜಾತಿ, ಮತ, ಪಂಥ ಧರ್ಮದ ಬೇಧವಿಲ್ಲದೇ ಸ್ಥಾಪನೆಗೊಂಡಿರುವ ಸ್ವಯಂ ಸೇವಾ ಸಂಘಟನೆಯಾಗಿದೆ. ಈ ಸಂಘಟನೆ ರಾಜಕೀಯದಿಂದ ಮುಕ್ತವಾಗಿದ್ದು, ಉತ್ತಮ ಗುಣಮಟ್ಟದ ಶಿಕ್ಷಣಕ್ಕೆ ಪೂರಕವಾಗಿದೆ. ಸ್ಕೌಟ್-ಗೈಡ್ ಚಟುವಟಿಕೆಗಳಿಂದ ಮಕ್ಕಳಲ್ಲಿ ಸಭ್ಯ ನಡವಳಿಕೆ, ಸಾಹಸ ಪ್ರವೃತ್ತಿ, ಶಿಸ್ತು ಬೆಳೆಯುತ್ತದೆ ಎಂದು ತಿಳಿಸಿದರು.

ಸ್ಕೌಟ್ ಮಾಸ್ಟರ್ ಶ್ರೀ ಮಲ್ಲಿಕಾರ್ಜುನ ಟಂಕಸಾಲೆ ಮಾತನಾಡಿ ಸ್ಕೌಟ್ ಪ್ರತಿಜ್ಞೆ ಮತ್ತು ನಿಯಮಗಳು ಮಕ್ಕಳಲ್ಲಿ ದೇಶ ಮತ್ತು ದೇವರಿಗಾಗಿ ತನ್ನ ಪಾಲಿನ ಕರ್ತವ್ಯ ಪ್ರಜ್ಞೆ ಮತ್ತು ಸೇವಾ ಮನೋಭಾವನೆ ಮೂಡಿಸುತ್ತದೆ ಎಂದು ತಿಳಿಸಿದರು. ಸ್ಕೌಟ್-ಗೈಡ್ ಸಂಸ್ಥೆಯ ಸ್ಥಳೀಯ ಕಾರ್ಯದರ್ಶಿ ಶ್ರೀ ಶಿವಕುಮಾರ್ ಮೆಣಸೆಯವರು ಸ್ಕೌಟ್ ಮತ್ತು ಗೈಡಿಂಗ್‌ನ ಇತಿಹಾಸವನ್ನು ತಿಳಿಸಿ ಬೇಡನ್ ಪೊವೆಲ್ ಅವರು ಮಕ್ಕಳಿಗಾಗಿ ಸ್ಥಾಪಿಸಿದ ಈ ಸಂಸ್ಥೆಯು ಭೂಮಿಯ ಮೇಲೆ ಮಕ್ಕಳು ಇರುವರೆಗೆ ಇರುತ್ತದೆ ಎಂದು ತಿಳಿಸಿದರು. ಫಾದರ್ ಜೋಸೆಫ್ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಉಪನ್ಯಾಸಕ ಶ್ರೀ ಸತೀಶ್ ಮತ್ತು ಮುಖ್ಯ ಗುರುಗಳಾದ ಸಿಸ್ಟರ್ ಸರಿತಾ ಉಪಸ್ಥಿತರಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ನೀಲಕಂಠ ಸ್ವಾಗತಿಸಿದರು. ಗೈಡ್ ಕ್ಯಾಪ್ಟನ್ ಶ್ರೀಮತಿ ರೇಷ್ಮಾ ನಿರೂಪಿಸಿದರು. ಸ್ಕೌಟ್ ಮಾಸ್ಟರ್ ಶ್ರೀ ಶ್ರೀಮಂತ ವಂದಿಸಿದರು.

* ಮಕ್ಕಳು ಶಿಕ್ಷಣದೊಂದಿಗೆ ಸೇವಾ ಮನೋಭಾವನೆ ಮತ್ತು ಸಂಸ್ಕಾರ ಪಡೆಯಬೇಕು. ಸಂಸ್ಕಾರ, ಸಂಸ್ಕೃತಿ ಇಲ್ಲದ ಶಿಕ್ಷಣಕ್ಕೆ ಅರ್ಥವಿಲ್ಲ ಎಂದು ಪಿ.ಎಸ್.ಐ. ಶ್ರೀ ಎಂ.ಬಿ. ಚಿಕ್ಕಣ್ಣನವರು ನುಡಿದರು. ಅವರು ದಿ। 6-3-2016ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ವತಿಯಿಂದ ಹಮ್ಮಿಕೊಂಡಿದ್ದ ಸ್ಕೌಟ್ಸ್-ಗೈಡ್ಸ್ ಮಕ್ಕಳ ಔರಾದ್ ತಾಲೂಕ ಮಟ್ಟದ ರ್‍ಯಾಲಿಗೆ ಚಾಲನೆ ನೀಡಿ ಮಾತನಾಡಿದರು.

ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು ಶಿಕ್ಷಣಕ್ಕೆ ಪೂರಕವಾಗಿ ವಿದ್ಯಾರ್ಥಿಗಳಲ್ಲಿ ಮನೋಸ್ಥೈರ್ಯ ಮತ್ತು ವಿವೇಚನಾ ಶಕ್ತಿ ಬೆಳೆಸುತ್ತವೆ ಎಂದು ಉಪಕಾರಗೃಹದ ಅರಕ್ಷಕ ಶ್ರೀ ಭಗವಂತರಾಯ ಪಾಟೀಲ್ ಅವರು ನುಡಿದರು.

ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯದಿಂದ ಪ್ರಾರಂಭವಾದ ಪಥಚಲನದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಸಮವಸ್ತ್ರದೊಂದಿಗೆ ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ವಿಠ್ಠಲ್ ಸಾದುರೆ ತಾಲೂಕ ದೈಹಿಕ ಶಿಕ್ಷಣ ಅಧಿಕಾರಿ ಶ್ರೀ ಕೆ.ಎಸ್. ಕುಂಬಾರ, ಎಸ್.ಬಿ.ಹೆಚ್. ಬ್ಯಾಂಕ್‌ನ ವ್ಯವಸ್ಥಾಪಕರಾದ ಶ್ರೀ ಪ್ರೇಮ ಸೇಧಿಯಾ, ಬೀದರನ ಸ್ಕೌಟ್ ಮಾಸ್ಟರ್ ಶ್ರೀ ರಾಚಯ್ಯ ನಾಸಿ, ಸ್ಕೌಟ್ಸ್-ಗೈಡ್ಸ್ ತಾಲ್ಲೂಕ ಕಾರ್ಯದರ್ಶಿ ಶ್ರೀ ಶಿವಕುಮಾರ ಮೆಣಸೆ, ಸರಕಾರಿ ನೌಕರರ ಸಂಘದ ನಿರ್ದೇಶಕ ಶ್ರೀ ಪಂಡರಿ ಆಡೆ ಉಪಸ್ಥಿತರಿದ್ದರು.

## ಚಿತ್ರದುರ್ಗ

ದಿನಾಂಕ 16-02-2016 ರಿಂದ 22-02-2016 ರ ವರೆಗೆ ಶ್ರೀ ಮೇದಾರ ಕೇತೇಶ್ವರ ಮಠ, ಸೀಬಾರ, ಚಿತ್ರದುರ್ಗ, ಇಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ, ಜಿಲ್ಲಾ ಸಂಸ್ಥೆ ಹಾಗು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಇವರ ಸಂಯುಕ್ತಾಶ್ರಯದಲ್ಲಿ ಚಿತ್ರದುರ್ಗ ತಾಲ್ಲೂಕಿನ ಶಿಕ್ಷಕ / ಶಿಕ್ಷಕಿಯರಿಗೆ ಸ್ಕೌಟ್ಸ್-ಗೈಡ್ಸ್ ಶಿಕ್ಷಣದ ಮೂಲ ತರಬೇತಿ" ಶಿಬಿರಗಳನ್ನು ನಡೆಸಲಾಯಿತು.

24 ಶಿಕ್ಷಕರಿಂದ ಕೂಡಿದ ಕಬ್ ಮಾಸ್ಟರ್ ತರಬೇತಿ ಶಿಬಿರದ ನಾಯಕರಾಗಿ ಶ್ರೀ ಕೃಷ್ಣಮೂರ್ತಿ ಎ.ಎಲ್.ಟಿ. (ಕಬ್) 36 ಶಿಕ್ಷಕರಿಂದ ಕೂಡಿದ ಸ್ಕೌಟ್ ಮಾಸ್ಟರ್ ಮೂಲ ತರಬೇತಿ ಶಿಬಿರದ ನಾಯಕರಾಗಿ, ಶ್ರೀ ಪಿ. ಮಂಜುನಾಥಪ್ಪ ಎಲ್.ಟಿ.(ಸ್ಕೌಟ್), 30 ಶಿಕ್ಷಕಿಯರಿಂದ ಕೂಡಿದ ಗೈಡ್ಸ್ ಕ್ಯಾಪ್ಟನ್ ತರಬೇತಿ ಶಿಬಿರದ ನಾಯಕಿಯಾಗಿ, ಸಿಸ್ಟರ್ ಸಿಂಥಿಯಾ ಎಲ್.ಟಿ.(ಗೈಡ್) 14 ಶಿಕ್ಷಕಿಯರಿಂದ ಕೂಡಿದ ಫ್ಲಾಕ್ ಲೀಡರ್ ತರಬೇತಿ ಶಿಬಿರದ ನಾಯಕಿಯಾಗಿ, ಶ್ರೀಮತಿ ನಾಗರತ್ನ ಎ.ಎಲ್.ಟಿ., (ಬುಲ್ ಬುಲ್ಸ್) ಇವರುಗಳು. ಶ್ರೀಮತಿ ಎಸ್.ಕೆ. ಛಾಯಾರವರ ಸಂಯೋಜನೆಯೊಂದಿಗೆ ಕಾರ್ಯ ನಿರ್ವಹಿಸಿದರು.

ದಿನಾಂಕ 17-02-2016 ರಂದು ಬೆಳಗ್ಗೆ ಮೂಲ ತರಬೇತಿ ಶಿಬಿರಗಳ ಉದ್ಘಾಟನಾ ಸಮಾರಂಭವು ಡಾ॥ ಶಿವಮೂರ್ತಿ ಮುರುಘಾಶರಣರು ಶ್ರೀ ಮುರುಘಾಮಠ ಚಿತ್ರದುರ್ಗ ಇವರ ಸಾನ್ನಿಧ್ಯದಲ್ಲಿ ಜರುಗಿತು. ಭಾರತ್ ಸ್ಕೌಟ್ಸ್ -ಗೈಡ್ಸ್ ತಾಲ್ಲೂಕಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಡಿ. ಬೋರಪ್ಪರವರು ಅಧ್ಯಕ್ಷತೆ ವಹಿಸಿದ ಈ ಸಮಾರಂಭದಲ್ಲಿ ಶ್ರೀ ಕೆ. ರವಿಶಂಕರ್ ರೆಡ್ಡಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಚಿತ್ರದುರ್ಗ ಇವರು ಎಲ್ಲ ಗಣ್ಯರೊಂದಿಗೆ ಸಸಿಗೆ ನೀರು ಹಾಕುವುದರೊಂದಿಗೆ ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಬಿ.ಎ. ಲಿಂಗಾರೆಡ್ಡಿ, ಜಿಲ್ಲಾ ಗೈಡ್ಸ್ ಆಯುಕ್ತರಾದ ಶ್ರೀಮತಿ ಜಯಶೀಲಾ ಮಹೇಶ್ವರಪ್ಪ, ಜಿಲ್ಲಾ ಖಜಾಂಚಿ ಶ್ರೀ ಅನ್ವರ್ ಪಾಷಾ, ಜಿಲ್ಲಾ ಸಹ ಕಾರ್ಯದರ್ಶಿ ಶ್ರೀ ವೈ. ಬಿ. ಮಹೇಂದ್ರನಾಥ, ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ತಾಲ್ಲೂಕಾ ಅಧ್ಯಕ್ಷರಾದ ಶ್ರೀ ವೀರಣ್ಣಾ ಕಾರ್ಯದರ್ಶಿಗಳಾದ, ಶ್ರೀ ದಿನೇಶ್ ಹಾಗೂ ಡಿಜಿಟಲ್ ವರ್ಲ್ಡ್ ಮಾಲೀಕರಾದ ಶ್ರೀ ದಾದಾಪೀರ್ ರವರು ಉಪಸ್ಥಿತರಿದ್ದರು.

ದಿನಾಂಕ 22-02-2016 ರಂದು ಮೂಲ ತರಬೇತಿ ಶಿಬಿರಗಳ ಸಮಾರೋಪ ಸಮಾರಂಭವು ಶ್ರೀ ಬಸವನಾಗಿದೇವ ಶರಣರು ಶ್ರೀ ಛಲವಾದಿ ಗುರುಪೀಠ, ಚಿತ್ರದುರ್ಗ ಇವರ ಸಾನಿಧ್ಯದಲ್ಲಿ ಜರುಗಿತು. ಭಾರತ್ ಸ್ಕೌಟ್ಸ್-ಗೈಡ್ಸ್ ತಾಲ್ಲೂಕು ಸಂಸ್ಥೆಯ ಅಧ್ಯಕ್ಷರಾದ ಶ್ರೀ ಡಿ ಬೋರಪ್ಪರವರು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಕರ್ನಾಟಕ ರಾಜ್ಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಮುಖ್ಯ ಆಯುಕ್ತರಾದ ಸನ್ಮಾನ್ಯ ಶ್ರೀ ಪಿ.ಜಿ.ಆರ್. ಸಿಂಧ್ಯರವರು ಆಗಮಿಸಿ ಸ್ಕೌಟ್ಸ್-ಗೈಡ್ಸ್ ಶಿಕ್ಷಣ ಬೆಳವಣಿಗೆ ಕುರಿತು ಮಾತನಾಡಿದರು. ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಕಲ್ಯಾಣ ಮಂಡಳಿಯ ಅಧ್ಯಕ್ಷರಾದ ಶ್ರೀ ಆಸೀಮ್ ಪೀರ್ ವಾಲೇಕಾರ್ ರವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಧರ್ಮ, ಸಹಿಷ್ಣುತೆ, ಶಿಸ್ತು, ಪರೋಪಕಾರ, ದೇಶಭಕ್ತಿಗೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಹೆಸರುವಾಸಿ ಎಂದು ನುಡಿದರು. ಈ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಂ. ರೇವಣಸಿದ್ದಪ್ಪ ಡಿ.ಡಿ.ಪಿ.ಐ. ರವರು, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಪಿ.ಎಲ್. ಸುರೇಶ್‌ರಾಜ್ ರವರು, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಬಿ.ಎ. ಲಿಂಗಾರೆಡ್ಡಿ ರವರು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆ. ರವಿಶಂಕರ್ ರೆಡ್ಡಿರವರು, ಜಿಲ್ಲಾ ಖಜಾಂಚಿಯವರಾದ ಶ್ರೀ ಅನ್ವರ್ ಪಾಷಾರವರು, ಜಿಲ್ಲಾ ಸಹ ಕಾರ್ಯದರ್ಶಿಗಳಾದ ಶ್ರೀ ವೈ.ಬಿ. ಮಹೇಂದ್ರನಾಥರವರು, ಡಿಜಿಟಲ್ ವರ್ಲ್ಡ್ ಮಾಲೀಕರಾದ ಶ್ರೀ ದಾದಾಪೀರ್ ರವರು ಉಪಸ್ಥಿತರಿದ್ದರು.

## ದಕ್ಷಿಣ ಕನ್ನಡ

* ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮಡಂತ್ಯಾರು ವತಿಯಿಂದ ಇತ್ತೀಚೆಗೆ ಸರಕಾರಿ ಉನ್ನತೀಕರಿಸಿದ ಪ್ರಾಥಮಿಕ ಶಾಲೆ ಓಡಿಲ್ನಾಳದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ದ್ವಿತೀಯ ಸೋಪಾನ, ಕಬ್ಸ್‌ಗಳಿಗೆ ದ್ವಿತೀಯ ಚರಣ ಮತ್ತು ಬುಲ್‌ಬುಲ್ಸ್‌ಗಳಿಗೆ ರಜತಗರಿ ಪರೀಕ್ಷೆಗಳನ್ನು ಜರುಗಿಸಲಾಯಿತು. ಕಬ್ಸ್-ಬುಲ್‌ಬುಲ್ಸ್ ವಿಭಾಗದ ಪರೀಕ್ಷಕರಾಗಿ ಶ್ರೀ ಮುಡಿಪು ರಾಮ ರಾವ್ ರವರು ಸಹಕರಿಸಿದರು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಹಾಜಿ ಅಬ್ದುಲ್ ಲತೀಫ್ ಸಾಹೇಬರು ಮಕ್ಕಳಿಗೆ ಸಿಹಿತಿಂಡಿ, ಹಣ್ಣು-ಹಂಪಲನ್ನು ನೀಡಿ ಶುಭ ಹಾರೈಸಿದರು.

* ದಿನಾಂಕ 22-02-2016 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ಮಡಂತ್ಯಾರು ಇದರ ವತಿಯಿಂದ ಸರಕಾರಿ ಉನ್ನತೀಕರಿಸಿದ ಪ್ರಾಥಮಿಕ ಶಲೆ ಓಡಿಲ್ನಾಳದಲ್ಲಿ ಸ್ಕೌಟ್-ಗೈಡ್ ಸ್ಥಾಪಕರಾದ ಲಾರ್ಡ್ ಬೇಡನ್ ಪಾವೆಲ್‌ರವರ ಸ್ಮರಣಾರ್ಥ ಚಿಂತನಾ ದಿನಾಚರಣೆ ಪ್ರಯುಕ್ತ ಸರ್ವಧರ್ಮ ಪ್ರಾರ್ಥನೆಯನ್ನು ನಡೆಸಲಾಯ್ತು. ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಹಾಜಿ। ಅಬ್ದುಲ್ ಲತೀಫ್ ಸಾಹೇಬರು ಲಾರ್ಡ್ ಬೇಡನ್ ಪೊವೆಲ್ಲರಂತೆ ನಾವೂ ಕೂಡಾ ಸಮಾಜಮುಖಿ ಕಾರ್ಯಗಳಲ್ಲಿ ನಮ್ಮನ್ನು ತೊಡಗಿಸಿಕೊಳ್ಳಬೇಕು. ಸಮಾಜದ ಒಳಿತಿಗಾಗಿ ಸದಾ ಸಿದ್ಧರಾಗಿರಬೇಕು ಎಂದರು. ಶ್ರೀ ರಾಮರಾಮ್ ಎಲ್.ಟಿ.(ಕಬ್) ರವರು ಬೇಡನ್ ಪೊವೆಲ್ಲರ ಮಹತ್ಸಾಧನೆಗಳನ್ನು ಸ್ಕೌಟ್ಸ್-ಗೈಡ್ಸ್ ಗಳಿಗೆ ತಿಳಿಸುತ್ತಾ ಬೆಳೆಯುವ ಪೈರು ಮೊಳಕೆಯಲ್ಲೇ ಎಂಬಂತೆ ಎಳೆಯ ಪ್ರಾಯದಲ್ಲಿ ಕಲಿತ ಮೌಲ್ಯಗಳು ಬೆಳೆದಾಗ ನಮಗೆ ಕೀರ್ತಿ ಗೌರವ ತರುತ್ತವೆ ಎಂದರು. ಓಡಿಲ್ನಾಳ ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀಯುತ ದತ್ತಾತ್ರೇಯ ಗೊಲ್ಲರವರು ಮಾತನಾಡುತ್ತಾ ಮಕ್ಕಳು ಸ್ಕೌಟಿಗೆ ಸೇರುವುದರಿಂದ ಮಕ್ಕಳಲ್ಲಿ ಶಿಸ್ತು, ಪ್ರಾಮಾಣಿಕತೆ, ಸಮಯ ಪ್ರಜ್ಞೆಗಳು ಬೆಳೆಯುತ್ತವೆ ಎಂದರು.

* ದಿನಾಂಕ 29-02-2016 ರಂದು ಸ.ಉ.ಪ್ರಾ.ಶಾಲೆ ಕುವೆಟ್ಟುವಿನಲ್ಲಿ ಸ್ಕೌಟ-ಗೈಡ್ ಕ್ಯಾಂಪೂರಿ ಹಮ್ಮಿಕೊಳ್ಳಲಾಗಿತ್ತು. ಪೂರ್ವಾಹ್ನ ಅತಿಥಿ ಅಭ್ಯಾಗತರ ಸಮಕ್ಷಮದಲ್ಲಿ ಧ್ವಜಾರೋಹಣದ ಮೂಲಕ ಕ್ಯಾಂಪೋರಿಗೆ ಚಾಲನೆ ನೀಡಲಾಯಿತು. ಜಿಲ್ಲಾ ಪಂಚಾಯತಿ ಸದಸ್ಯರಾದ ಶ್ರೀಮತಿ ಮಮತಾ ಎಂ. ಶೆಟ್ಟಿಯವರು ದೀಪ ಬೆಳಗಿಸಿ ಕ್ಯಾಂಪೋರಿಯ ಉದ್ಘಾಟನೆಯನ್ನು ಮಾಡಿ ಪ್ರತಿಯೊಬ್ಬರೂ ಸ್ಪರ್ಧಾತ್ಮಕ ಚಟುವಟಿಕೆಗಳಲ್ಲಿ ಭಾಗವಹಿಸಬೇಕು. ಜೀವನದಲ್ಲಿ ನಾವು ಸಫಲತೆಯನ್ನು ಕಾಣಬೇಕಾದರೆ ಆತ್ಮ ವಿಶ್ವಾಸ, ಧೈರ್ಯ ಮತ್ತು ಶಿಸ್ತು ಅವಶ್ಯ ಇವೆಲ್ಲವನ್ನು ಸ್ಕೌಟ್-ಗೈಡ್ ಗಳಿಗೆ ಎಳೆಯ ಪ್ರಾಯದಲ್ಲೇ ಕಲಿಸಲಾಗುತ್ತದೆ. ಇದರ ಪ್ರಯೋಜನವನ್ನು ಮಕ್ಕಳು ಪಡೆಯಬೇಕು ಎಂದು ಹೇಳಿ ಶುಭ ಹಾರೈಸಿದರು. ಕುವೆಟ್ಟು ಗ್ರಾಮ ಪಂಚಾಯತಿ ಅಧ್ಯಕ್ಷರಾದ ಶ್ರೀ ಅಶೋಕ್ ಕೋಟ್ಯಾನ್ ರವರು ಮಾತನಾಡುತ್ತಾ ದೇಶದಲ್ಲಿ ನಾವು ಕಾಣುತ್ತಿರುವ ಭಯೋತ್ಪಾದನೆಯ ನಿರ್ಮೂಲನೆ ಮತ್ತು ದುಶ್ಚಟಗಳ ಪಿಡುಗಿನ ನಾಶದಂತಹ ಕಾರ್ಯಗಳಲ್ಲಿ ನಾವೆಲ್ಲರೂ ಒಂದಾಗಿ ಶ್ರಮಿಸಿ ದೇಶವನ್ನು ಪ್ರಗತಿಯತ್ತ ಕೊಂಡೊಯ್ಯಬೇಕು ಎಂದರು. ಕುವೆಟ್ಟು ಕ್ಷೇತ್ರದ ತಾಲೂಕು ಪಂಚಾಯತಿ ಸದಸ್ಯರಾದ ಶ್ರೀ ಗೋಪಿನಾಥ್ ಜಿ. ನಾಯಕ್‌ರವರು ಸ್ವಚ್ಛತೆಗೆ ಆದ್ಯತೆ ನೀಡಬೇಕು. ಈ ಕಾರ್ಯ ಸ್ಕೌಟ್-ಗೈಡ್ ಸಂಸ್ಥೆಯ ಮೂಲಕ ಎಳೆಯ ಪ್ರಾಯದ ಮಕ್ಕಳಲ್ಲಿ ನಡೆಯುತ್ತಿರುವುದು ತುಂಬಾ ಸಂತೋಷದ ವಿಷಯವಾಗಿದೆ ಎಂದರು. ಶಿಕ್ಷಣ ಸಂಯೋಜಕರಾದ ಶ್ರೀ ರಮೇಶ್ ಕೆ.ರವರು 2016-17ನೇ ಶೈಕ್ಷಣಿಕ ವರ್ಷದಲ್ಲಿ ಎಲ್ಲಾ ಶಾಲೆಗಳಲ್ಲಿಯೂ ಕಡ್ಡಾಯವಾಗಿ ದಳಗಳನ್ನು ಆರಂಭಿಸುವ ಮೂಲಕ ಸ್ಕೌಟ್-ಗೈಡ್‌ಗಳ ಸಂಖ್ಯೆಯನ್ನು ದ್ವಿಗುಣಗೊಳಿಸಲು ಕ್ರಮ ಕೈಗೊಳ್ಳಲಾಗುವುದು ಎಂದು ಹೇಳಿದರು. ಕರ್ನಾಟಕ ರಾಜ್ಯ ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಬೆಳ್ತಂಗಡಿ ತಾಲೂಕಿನ ಅಧ್ಯಕ್ಷರಾದ ಶ್ರೀ ಪ್ರಭಾಕರ್ ಹೆಗ್ಡೆಯವರು ಮಕ್ಕಳಲ್ಲಿ ಶಿಸ್ತು, ಸಂಯಮ ಮತ್ತು ಅರಿವು ಬರಬೇಕದರೆ ಮಕ್ಕಳು ಸ್ಕೌಟ್ಸ್-ಗೈಡ್ಸ್ ಚಳವಳಿಯಲ್ಲಿ ಸೇರುವುದು ಅಗತ್ಯ ಎನ್ನುತ್ತಾ ಮಕ್ಕಳೆಲ್ಲರು ಭವ್ಯ ಭಾರತದ ಸತ್ಪ್ರಜೆಗಳಾಗುವಂತೆ ಶುಭ ಹಾರೈಸಿದರು. ಸಂಸ್ಥೆಯ ಅಧ್ಯಕ್ಷರಾದ ಹಾಜಿ॥ ಅಬ್ದುಲ್ ಲತೀಫ್ ಸಾಹೇಬ್ ರವರು "ಬೆಳೆಯುವ ಸಿರಿ ಮೊಳಕೆಯಲ್ಲೇ, ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ" ಎಂದು

ನುಡಿದರು. ಬೆಳ್ತಂಗಡಿ ಆರಕ್ಷಕ ಠಾಣೆಯ ಉಪನಿರೀಕ್ಷಕರಾದ ಶ್ರೀ ಸಂದೇಶ್ ಕುಮಾರ್ ರವರು ನಗರ ಮೆರವಣಿಗೆಯನ್ನು ಉದ್ಘಾಟಿಸಿ ಸ್ಕೌಟ್-ಗೈಡ್‌ಗಳಿಗೆ ಶುಭ ಹಾರೈಸಿದರು. ಸ.ಉ.ಪ್ರಾ. ಶಾಲೆ ಕುವೆಟ್ಟು ಇದರ ಎಸ್.ಡಿ.ಎಂ.ಸಿ., ಅಧ್ಯಕ್ಷರಾದ ಶ್ರೀ ಜನಾಬ್ ಅಬ್ಬೋನ್ ಮದ್ದಡ್ಕರವರು ಎಲ್ಲರಿಗೂ ಸ್ವಾಗತವನ್ನು ಕೋರಿದರು.

ವೇದಿಕೆಯಲ್ಲಿ ಕುವೆಟ್ಟು ಗ್ರಾಮ ಪಂಚಾಯತಿ ಉಪಾಧ್ಯಕ್ಷೆ ಶ್ರೀಮತಿ ಅಕ್ಷತಾ ಎಸ್. ಶೆಟ್ಟಿ, ನೂರಲ್ ಹುದಾ ಜುಮ್ಮಾ ಮಸೀದಿ ಮದ್ದಡ್ಕ ಇದರ ಅಧ್ಯಕ್ಷರಾದ ಶ್ರೀ ಎಸ್.ಎ.ಎಮ್. ರಾಝಿಯುದ್ದೀನ್, ಉಸ್ಮಾನ್ ಟಿಂಬರ್ ಮರ್ಚಂಟ್ ಆಲ್ದೂರು, ಗೈಡ್ಸ್ ವಿಭಾಗದ ಜಿಲ್ಲಾ ಸಂಘಟನಾ ಸಹ ಆಯುಕ್ತೆ ಶ್ರೀಮತಿ ಆನಂದಿ ಟೀಚರ್, ಮಾಲಾಡಿ ಗ್ರಾಮ ಪಂಚಾಯತಿ ಅಧ್ಯಕ್ಷರಾದ ಶ್ರೀ ಬೇಬಿ ಸುವರ್ಣ, ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಣಾಧಿಕಾರಿಗಳಾದ ಶ್ರೀಮತಿ ಯಶೋಧರ ಸುವರ್ಣ ಉಪಸ್ಥಿತರಿದ್ದರು. ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಎಂ. ಶಾಂತಾರಾಮ ಪ್ರಭು ರವರು ರ್‍ಯಾಲಿಯ ಮುನ್ನೋಟವನ್ನಿತ್ತರು. ರ್‍ಯಾಲಿ ನಿರ್ದೇಶಕರಾದ ಶ್ರೀಮತಿ ಪೂರ್ಣಿಮಾರವರು ರ್‍ಯಾಲಿ ವರದಿಯನ್ನು ಮಂಡಿಸಿದರು. ಸಂಸ್ಥೆಯ ಕೋಶಾಧಿಕಾರಿಗಳಾದ ಶ್ರೀ ರವೀಂದ್ರ ರಾವ‌ರ್ ರವರು ಧನ್ಯವಾದವಿತ್ತರು. ಸಹ ಕಾರ್ಯದರ್ಶಿ ಧರಣೇಂದ್ರ ಕೆ. ರವರು ಕಾರ್ಯಕ್ರಮ ಸಂಯೋಜಿಸಿದರು.

ಧ್ವಜಸ್ತಂಭ ರಚನೆ, ಸುಧಾರಿತ ಗುಡಾರ ರಚನೆ, ಗ್ಯಾಜೆಟ್ ತಯಾರಿ, ರಸಪ್ರಶ್ನೆ, ಕರಕುಶಲ ವಸ್ತುಗಳ ತಯಾರಿ, ಬೆಂಕಿ ಬಲಸದೆ ಅಡುಗೆ ತಯಾರಿ, ದೇಶಭಕ್ತಿ ಗೀತೆ ಅಥವಾ ಬಾವೈಕ್ಯತಾಗೀತೆ ಮೊದಲಾದ ಚಟುವಟಿಕೆಗಳನ್ನು ನಡೆಸಲಾಯಿತು. ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳಿಗೆ ಚಿತ್ರ ಬಿಡಿಸುವ ಸ್ಪರ್ಧೆ, ಕಾಗದದಿಂದ ಆಕೃತಿ ತಯಾರಿ, ಧಾನ್ಯದಿಂದ ಆಕೃತಿ ತಯಾರಿ, ಜಾನಪದ ಅಥವಾ ಅಭಿನಯಗೀತೆ ಅಥವಾ ಕಥೆ ಹೇಳುವ ಸ್ಪರ್ಧೆಗಳನ್ನು ನಡೆಸಲಾಯಿತು. ಅಪರಾಹ್ನ ಆಕರ್ಷಕ ನಗರ ಮೆರವಣಿಗೆಯನ್ನು ಜರುಗಿಸಲಾಯಿತು.

## ಹಾವೇರಿ

ದಿನಾಂಕ 20-02-2016 ರಿಂದ 22-02-2016 ರ ವರೆಗೆ ಸರಕಾರಿ ಉನ್ನತ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಹತ್ತಿಮತ್ತೂರಿನಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳ 26ನೇ ಮೇಳವನ್ನು ಏರ್ಪಡಿಸಲಾಗಿತ್ತು. ಮೂರು ದಿನಗಳ ಕಾರ್ಯಕ್ರಮವು ಪರಮಪೂಜ್ಯ ಶ್ರೀ ಮ.ನಿ.ಪ್ರ. ನಿಜಗುಣಯೋಗಿಗಳು, ವಿರಕ್ತಿ ಮಠ ಹತ್ತಿಮತ್ತೂರ ಇವರ ಸಾನ್ನಿಧ್ಯದಲ್ಲಿ ನೆರವೇರಿತು. ಶ್ರೀ ನಂದೀಶ್ ಹಾವಣಗಿ ಅಧ್ಯಕ್ಷರು ಮತ್ತು ಹತ್ತಿಮತ್ತೂರ ಪದಾಧಿಕಾರಿಗಳು ಉಪಸ್ಥಿತರಿದ್ದರು.

ದಿನಾಂಕ 20-02-2016 ರಂದು ಶ್ರೀ ಎಂ.ಸಿ. ಆನಂದ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಭಾಗವಹಿಸಿ, ಮಕ್ಕಳಿಗೆ ಶಾಲಾ ಶಿಕ್ಷಣದ ಜೊತೆಗೆ ಸ್ಕೌಟ್ಸ್-ಗೈಡ್ಸ್, ಸೇವಾದಳ. ಎನ್.ಎಸ್.ಎಸ್. ಮತ್ತು ಎನ್.ಸಿ.ಸಿ. ತರಬೇತಿಗಳು ಅತ್ಯವಶ್ಯಕವೆಂದರು. ಈ ತರಬೇತಿಗಳು ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಅನುಕೂಲವಾಗುವುದೆಂದರು.

ದಿನಾಂಕ 21-02-2016 ರಂದು ಸಂಪೂರ್ಣ ಸ್ವಚ್ಛತಾ ಆಂದೋಲನದ ಅಂಗವಾಗಿ ಹತ್ತಿಮತ್ತೂರಿನ ಕುಡಿಯುವ ನೀರಿನ ಪುರಾತನ ಹೊಂಡವನ್ನು ಸ್ವಚ್ಛಗೊಳಿಸಲಾಯಿತು. ಪ್ರಭಾತ ಪೇರಿಯೊಂದಿಗೆ ಗ್ರಾಮಸ್ಥರಲ್ಲಿ ಸ್ವಚ್ಛತೆಯ ಅರಿವು ಮಾಡಿಸಲಾಯಿತು. ಮಧ್ಯಾಹ್ನ ಮೋಜಿನ ಜಾತ್ರೆ ಏರ್ಪಡಿಸಲಾಗಿತ್ತು. ರಾತ್ರಿ ಶಿಭಿರಾಗ್ನಿ ಕಾರ್ಯಕ್ರಮವನ್ನು ಮತ್ತು ಸಾಂಸ್ಕೃತಿಕ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಮುಖ್ಯ ಅತಿಥಿಗಳಾಗಿ ಶ್ರೀ ಸಿದ್ಧರಾಮೇಶ್ವರ ಸಿ.ಪಿ.ಐ. ಸವಣೂರು ಇವರು ಭಾಗವಹಿಸಿದ್ದರು. ಮಹಿಳಾ ದೌರ್ಜನ್ಯ ತಡೆಗಟ್ಟುವುದು, ಆರಕ್ಷಕ ಇಲಾಖೆ, ಅಂತಹ ಏನೇ ಘಟನೆಗಳಿದ್ದರೂ ಪೋಲೀಸ್ ಇಲಾಖೆಗೆ ತಿಳಿಸಲು ಮಕ್ಕಳಿಗೆ ತಿಳಿಸಿದರು.

ದಿನಾಂಕ 22-02-2016 ರಂದು ಸರ್ವಧರ್ಮ ಪ್ರಾರ್ಥನೆ ಹಾಗೂ ಸ್ಕೌಟ್-ಗೈಡ್ ಸ್ಥಾಪಕರಾದ ಬೇಡನ್ ಪಾವೆಲರ ಜನ್ಮ ದಿನಾಚರಣೆ ಆಚರಣೆ ಪರಮ ಪೂಜ್ಯರ ಸಾನಿಧ್ಯದಲ್ಲಿ ನೆರವೇರಿತು. ಪೂಜ್ಯರು ಆಶೀರ್ವದಿಸುತ್ತಾ

ಸರ್ವಧರ್ಮದ ಸಾರ "ದಯವೇ ಧರ್ಮದ ಮೂಲ". ಹಿಂದು, ಕ್ರೈಸ್ತ, ಮುಸ್ಲಿಂ, ಜೈನ್, ಧರ್ಮಗಳ ಸಾರ ಸರ್ವರಿಗು ಭಾರತದಲ್ಲಿ ನೆಮ್ಮದಿಯ ಜೀವನ ಸಾಗಿಸಲು ಅನುಕೂಲಕರ ವಾತಾವರಣವಿದೆ ಎಂದರು. ಡಾ. ಸೈಯದ್ ರ್‍ಹೋನ್ ಮುಲ್ಲ, ಹಿಂದು ಮುಸ್ಲಿಂ ಭಾವೈಕ್ಯತೆ ಕುರಿತು ಭಾಷಣಮಾಡಿದರು. ಲಕ್ಷಾಂತರ ಸದಸ್ಯರನ್ನು ಹೊಂದಿರುವ ಈ ಸಂಸ್ಥೆಯ ಸ್ಥಾಪಕರ ಹುಟ್ಟು ಹಬ್ಬವನ್ನು ಇದೇ ಸಂದರ್ಭದಲ್ಲಿ ಆಚರಿಸಲಾಯಿತು. 200 ಸ್ಕೌಟ್ಸ್, 150 ಗೈಡ್ಸ್, 20 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು.

## ಹಾಸನ

ದಿನಾಂಕ 03-03-2016 ರಂದು ಅರಸೀಕೆರೆ ತಾಲ್ಲೂಕಿನ ಮುರುಂಡಿ ಗ್ರಾಮದ ಸರ್ಕಾರಿ ಪ್ರೌಢಶಾಲೆಯಲ್ಲಿ "ಪ್ರೇರಣ ಗೈಡ್ ಘಟಕ"ದ ವತಿಯಿಂದ ವಿಶ್ವ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಸಂಸ್ಥಾಪಕರ ಮತ್ತು ಚಿಂತನಾ ದಿನಾಚರಣೆಯನ್ನು ಆಚರಿಸಲಾಯಿತು.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆ, ಅರಸೀಕೆರೆಯ ಸಹಾಯಕ ಜಿಲ್ಲಾ ಆಯುಕ್ತರಾದ ಶ್ರೀ ಬಿ.ಕೆ. ಯೋಗೀಶಾಚಾರ್ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡುತ್ತಾ ಸ್ಕೌಟಿಂಗ್ ಮತ್ತು ಗೈಡಿಂಗ್ ಇಂದಿನ ಯುವ ಜನಾಂಗಕ್ಕೆ ಒಂದು ಅವಕಾಶ. ತಲೆಮಾರುಗಳ ಮಧ್ಯೆ ತಿಳುವಳಿಕೆಯನ್ನು ಉತ್ತಮಪಡಿಸಿಕೊಳ್ಳುವ ಒಂದು ಮಾರ್ಗ. ಮಕ್ಕಳು ಮತ್ತು ವಯಸ್ಕರು ತಮ್ಮ ಸೇವೆಯಲ್ಲಿ ಮೌಲಿಕವಾದ ತರಬೇತಿ ಮತ್ತು ಅನುಭವ ಪಡೆಯುತ್ತಾರೆ ಎಂದು ಹೇಳಿದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಜೆ.ಎಲ್ ಲೀಲಾಮಹೇಶ್ವರ್ ಮಾತನಾಡಿ ಲಾರ್ಡ್ ಬೇಡನ್ ಪೋವೆಲ್‌ರೊಂದಿಗೆ ದಕ್ಷಿಣ ಆಫ್ರಿಕಾದಲ್ಲಿ 1899ರಲ್ಲಿ ಬೋಯರ್ ನಿವಾಸಿಗಳ ವಿರುದ್ಧ ನಡೆದ ಮೆಫೆಕಿಂಗ್ ಯುದ್ದವು ವಿಶ್ವ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಪ್ರಾರಂಭಕ್ಕೆ ಕಾರಣವಾದ ಹಿನ್ನಲೆಯನ್ನು ವಿವರಿಸಿ ವೈಯಕ್ತಿಕವಾಗಿ ಜವಾಬ್ದಾರಿಯುತ ಪ್ರಜೆಗಳಾಗಿ ಸ್ಥಳೀಯ, ರಾಷ್ಟ್ರೀಯ, ಅಂತರಾಷ್ಟ್ರೀಯ ಸದಸ್ಯರಾಗಿ ತಮ್ಮಲ್ಲಿ ಅಡಗಿರುವ ಶಾರೀರಿಕ, ಸಾಮಾಜಿಕ ಹಾಗೂ ಪಾರಮಾರ್ಥಿಕ ಚೈತನ್ಯಗಳನ್ನು ಪೂರ್ಣವಾಗಿ ಹೊಂದುವುದರಲ್ಲಿ ಯುವ ಜನತೆಯ ಬೆಳವಣಿಗೆಗೆ ಸಹರಿಸುವಲ್ಲಿ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಕೊಡುಗೆ ಅದ್ಭುತವಾದುದು ಎಂದು ಹೇಳಿದರು.

40 ಗೈಡ್‌ಗಳು ಮತ್ತು ಶಾಲೆಯ ಶಿಕ್ಷಕ ಶಿಕ್ಷಕಿಯರು ಭಾಗವಹಿಸಿದ್ದ ಈ ದಿನಾಚರಣಾ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಮುಖ್ಯೋಪಾಧ್ಯಾಯಿನಿ ಶ್ರೀಮತಿ ಹೆಚ್.ಆರ್. ಶಕುಂತಲ ವಹಿಸಿಕೊಂಡಿದ್ದರು. ಪ್ರೇರಣಾ ಗೈಡ್ ಘಟಕದ ಗೈಡ್ ಕ್ಯಾಪ್ಟನ್ ಶ್ರೀಮತಿ ಕೆ.ಪಿ. ಕಾತ್ಯಾಯಿನಿ ಕಾರ್ಯಕ್ರಮವನ್ನು ವ್ಯವಸ್ಥಿತವಾಗಿ ನಡೆಸಿಕೊಟ್ಟರು.

* ದಿನಾಂಕ : 04-03 2016 ರಂದು ಅರಸೀಕೆರೆ ನಗರದ ಸಂತಮರಿಯ ಆಂಗ್ಲ ಪ್ರಾಥಮಿಕ ಶಾಲೆಯಲ್ಲಿ "ಲಾರ್ಡ್ ಬೇಡನ್ ಪೊವೆಲ್ ಸ್ಕೌಟ್ ಟ್ರೂಪ್"ನ್ನು ಪ್ರಾರಂಭಿಸಲಾಯಿತು.

50 ಸ್ಕೌಟ್‌ಗಳನ್ನೊಳಗೊಂಡ ಈ ಸ್ಕೌಟ್ ಟ್ರೂಪ್‌ನ್ನು ರಾಷ್ಟ್ರಪ್ರಶಸ್ತಿ ವಿಜೇತ ಶಿಕ್ಷಕಿ ಶ್ರೀಮತಿ ಎಂ.ವಿ. ಕುಸುಮ ಉದ್ಘಾಟಿಸಿ ಮಾತನಾಡುತ್ತ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಯುವ ಜನತೆಗಿರುವ ಸ್ವಯಂ ಪ್ರೇರಿತವಾದ, ರಾಜಕೀಯವಲ್ಲದ ಶೈಕ್ಷಣಿಕ ಚಳುವಳಿಯಾಗಿದೆ. ಯಾವುದೇ ಜನಾಂಗ ಅಥವಾ ಮತಗಳ ಬೇದವಿಲ್ಲದೇ ಎಲ್ಲರಿಗೂ ಮುಕ್ತವಾಗಿರುವ ಸೇವಾ ಸಂಸ್ಥೆಯಾಗಿದೆ ಮತ್ತು ಸ್ಥಳೀಯ, ರಾಷ್ಟ್ರೀಯ, ಅಂತರಾಷ್ಟ್ರೀಯ ಶಾಂತಿ, ಅರಿವು ಮತ್ತು ಸಹಕಾರಗಳ ಬೆಳವಣಿಗೆಯೊಂದಿಗೆ ಮಕ್ಕಳಲ್ಲಿ ಶಿಸ್ತು ಮತ್ತು ಸೇವಾ ಮನೋಭಾವನೆಯನ್ನು ರೂಡಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ ಎಂದು ಹೇಳಿದರು.

ಅರಸೀಕೆರೆಯ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಮತ್ತು ರಾಜ್ಯ ಸ್ಕೌಟರ್ ಪ್ರತಿನಿಧಿಯಾದ ಶ್ರೀ ಜೆ.ಎಲ್. ಲೀಲಾಮಹೇಶ್ವರ್ ಮಾತನಾಡಿ 1907ರಲ್ಲಿ ಪ್ರಾರಂಭಗೊಂಡ ಸ್ಕೌಟಿಂಗ್ 1909 ರಲ್ಲಿ

ಪ್ರಾರಂಭಗೊಂಡ ಗೈಡಿಂಗ್ ಇಂದು ವಿಶ್ವದ 216ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ಮನ್ನಣೆ ಪಡೆದ ಜಾಗತಿಕ ಯುವ ಸಂಘಟನೆಯಾಗಿದ್ದು ಬಾಲಕ ಬಾಲಕಿಯರು ಬಿಡುವಿನ ಸಮಯವನ್ನು ಹಿತರಕವಾದ ಆರೋಗ್ಯಕರ ಚಟುವಟಿಕೆಗಳಲ್ಲಿ ತೊಡಗಿಸುವಂತೆ ಮಾಡುತ್ತದೆ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ ಶಾಲೆಯ ಮುಖ್ಯೋಪಾಧ್ಯಾಯಿನಿ ಸಿಸ್ಟರ್ ಜೆನೆಫರ್ ಮಾತನಾಡಿ ಮಕ್ಕಳಲ್ಲಿ ಶಿಸ್ತು ಮತ್ತು ಸೇವಾ ಮನೋಭಾವನೆಯನ್ನು ರೂಢಿಸುವ ಉದ್ದೇಶದಿಂದ ಸ್ಕೌಟಿಂಗ್ ಪ್ರಾರಂಭಿಸಿದ್ದು ಮುಂದಿನ ಪ್ರಸಕ್ತ ಸಾಲಿನಲ್ಲಿ ಗೈಡಿಂಗ್‌ನ್ನು ಕೂಡ ಬಾಲಕಿಯರಿಗಾಗಿ ಪ್ರಾರಂಭಿಸುವುದಾಗಿ ಹೇಳಿದರು.

ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದ ಎ.ಡಿ.ಸಿ. ಶ್ರೀ ಯೋಗೀಶಚಾರ್ ಮತ್ತು ಡಿ.ಟಿ.ಸಿ. ಶ್ರೀಮತಿ ಕಾಮೇಶ್ವರಿ ಭಟ್ ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಮಹತ್ವದ ಬಗ್ಗೆ ಮಾತನಾಡಿದರು.

* ದಿನಾಂಕ 05-03-2016 ರಂದು ಸ್ವರ್ಣ ವಿದ್ಯಾಸಂಸ್ಥೆಯಲ್ಲಿ ಸಾಯಿ ಸ್ಫೂರ್ತಿ ಸ್ಕೌಟ್ಸ್-ಗೈಡ್ಸ್‌ಗಳು ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ ರವರ 159ನೇ ಹಾಗೂ ಒಲೇವ್ ಬೇಡನ್ ಪೊವೆಲ್ ರವರ 127ನೇ ಜನ್ಮ ದಿನಾಚರಣೆಯನ್ನು ಆಚರಿಸಿದರು. ಮುಖ್ಯ ಅತಿಥಿಗಳಾಗಿ ಹೊಳೆನರಸೀಪುರದ ಶ್ರೀ ಧೀರೇಂದ್ರ ಎಸ್.ಎಂ. (ಕ್ರೈಮ್ ಬ್ರಾಂಚ್, ಟೌನ್ ಪೋಲಿಸ್ ಠಾಣೆ) ರವರು ಆಗಮಿಸಿದ್ದರು. ಇವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಧೈರ್ಯ, ಸಾಹಸದ ಬಗ್ಗೆ ಹಾಗೂ ನಮ್ಮ ನಾಡಿನ ಯೋಧರ ದೇಶಪ್ರೇಮ ಹಾಗೂ ಅವರು ನಮ್ಮ ದೇಶವನ್ನು ಹೇಗೆ ರಕ್ಷಿಸುತ್ತಾರೆ ಎಂದು ತಿಳಿಸಿದರು. ಈ ಕಾರ್ಯಕ್ರಮದಲ್ಲಿ ತಾಲೂಕಿನ ಕಾರ್ಯದರ್ಶಿಗಳಾದ ಶ್ರೀ ನಾರಾಯಣಶೆಟ್ಟರು ಆಗಮಿಸಿದ್ದರು. ಸ್ಕೌಟ್ಸ್-ಗೈಡ್ಸ್ ಗಳಿಗೆ ಸಂಸ್ಥಾಪಕರ ಹುಟ್ಟು ಹಾಗೂ ಅವರ ಬೆಳವಣಿಗೆಯ ದಾರಿಯನ್ನು ಮತ್ತು ಸಂಸ್ಥೆಯ ಇತಿಹಾಸವನ್ನು ವಿವರಿಸಿದರು.

ಶಾಲೆಯ ಕಾರ್ಯದರ್ಶಿಗಳಾದ ಶ್ರೀಮತಿ ಶೋಭ ಬಾಲಕೃಷ್ಣ ಹಾಗೂ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ದೇವರಾಜ್ ರವರು ಶುಭ ಹಾರೈಸಿದರು. ಈ ಎಲ್ಲಾ ಕಾರ್ಯಕ್ರಮವನ್ನು ಆಯೋಜಿಸಿ, ನಿರೂಪಿಸಿದವರು ಗೈಡ್ ಶಿಕ್ಷಕಿ ಶ್ರೀಮತಿ ಕುಮುದ. ಆರ್., ಶ್ರೀಮತಿ ನೂರ್ ಫಾತಿಮ ರವರು ಸ್ವಾಗತಿಸಿದರು, ಕುಮಾರಿ ಚೈತ್ರ ವಂದಿಸಿದರು.

## ಕೊಡಗು

ದಿನಾಂಕ 22-02-2016 ರಂದು ಜಿಲ್ಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ ರವರ ಜನ್ಮ ದಿನವನ್ನು ಜಿಲ್ಲಾಧಿಕಾರಿಗಳಾದ ಶ್ರೀ ಮೀರ್ ಅನೀಸ್ ಅಹಮದ್ ರವರ ಅಧ್ಯಕ್ಷತೆಯಲ್ಲಿ ಆಚರಿಸಲಾಯಿತು. ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಡೈಸಿ ಎಂ. ಹೆಚ್.ಡಬ್ಲ್ಯೂ.ಬಿ. ಇವರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ಜಿಮ್ಮಿ ಸಿಕ್ವೇರಾ ಎಲ್.ಟಿ.(ಸ್ಕೌ) ಹಾಗು ಜಿಲ್ಲಾ ಆಯುಕ್ತರು ದಿನದ ಮಹತ್ವದ ಕುರಿತು ಪ್ರಾಸ್ತಾವಿಕ ನುಡಿಗಳನ್ನಾಡಿದರು.

ಜಿಲ್ಲಾಧಿಕಾರಿಗಳಾದ ಶ್ರೀ ಮೀರ್ ಅನೀಸ್‌ರವರು ಮಾತನಾಡಿ ಸ್ಕೌಟ್ಸ್-ಗೈಡ್ಸ್‌ನಲ್ಲಿ ಭಾಗವಹಿಸುವುದರಿಂದ ಮಕ್ಕಳಲ್ಲಿ ಶಿಸ್ತು, ಸಂಯಮ, ದೇಶಾಭಿಮಾನ, ನಿಯಮಪಾಲನೆ, ಸೇವಾ ಮನೋಭಾವ ಮುಂತಾದ ಉನ್ನತ ಗುಣಗಳು ಬೆಳೆಯುತ್ತವೆ ಎಂದು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದರು. ನಂತರ ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪತ್ರಗಳನ್ನು ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೇಂಜರ್ಸ್-ರೋವರ್ಸ್‌ಗಳಿಗೆ ವಿತರಿಸಿದರು. ಈ ಸಂದರ್ಭದಲ್ಲಿ ಜಿಲ್ಲೆಯ ವಿವಿಧ ಶಾಲೆಗಳಿಂದ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್, ರೇಂಜರ್ಸ್-ರೋವರ್ಸ್, ಸ್ಕೌಟರ್ಸ್-ಗೈಡರ್ಸ್‌ಗಳು, ವಿವಿಧ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.

ಕಬ್ ಮಾಸ್ಟರ್ ಶ್ರೀಮತಿ ರತಿಕುಮಾರಿಯವರು ವಂದನಾರ್ಪಣೆ ಮಾಡಿದರು. ಕಬ್ ಮಾಸ್ಟರ್ ಶ್ರೀ ಓಮನ್‌ರವರು ನಿರೂಪಿಸಿದರು. ವೇದಿಕೆಯಲ್ಲಿ ಗೈಡ್ ಕಮೀಶನರ್ ಶ್ರೀಮತಿ ಸೀಟಾ ಚೆಟ್ಟಿಯಪ್ಪ. ಜಿಲ್ಲಾ ಸಂಘಟಕರಾದ ಶ್ರೀಮತಿ ಯು.ಸಿ. ದಮಯಂತಿ ಮಹಾಪೋಷಕರಾದ ಶ್ರೀ ಅಯ್ಯಣ್ಣವರು ಹಾಗೂ ಇತರ ಗಣ್ಯರು ಉಪಸ್ಥಿತರಿದ್ದರು.

## ಕೋಲಾರ

ಸಮಾಜದ ಪ್ರತಿಯೊಬ್ಬರು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ಸದಸ್ಯರಾಗಿ ಇದರಲ್ಲಿರುವ ಚಟುವಟಿಕೆ ಮತ್ತು ಶಿಬಿರಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದಾಗ ಸಂಪೂರ್ಣ ಪ್ರಜೆಗಳಾಗಿ ರೂಪುಗೊಳ್ಳಲು ಸಾಧ್ಯ ಎಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಶ್ರೀ ನರಸಿಂಹ ರೆಡ್ಡಿ ರವರು ನುಡಿದರು. ಅವರು ಪ್ರಥಮ ದರ್ಜೆ ಕಾಲೇಜು ಮತ್ತು ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಕೋಲಾರ ವತಿಯಿಂದ ಕಾಲೇಜಿನಲ್ಲಿ ನಡೆದ ಪ್ರಾವೀಣ್ಯತಾ ಪದಕ ಶಿಬಿರದ ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಸಂಸ್ಥೆಯ ಪ್ರಾವೀಣ್ಯತಾ ಪದಕಗಳ ಬಗ್ಗೆ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ವಿ. ಬಾಬು ರವರು ಮಾಹಿತಿ ನೀಡಿ, ಈ ಪದಕಗಳನ್ನು ಪಡೆಯಲು ಬೇಕಾದ ಮಾರ್ಗದರ್ಶನ ಹಾಗೂ ತರಬೇತಿಯನ್ನು ಜಿಲ್ಲಾ ಸಂಸ್ಥೆ ನೀಡಲು ಸದಾ ಸಿದ್ಧವಿದ್ದು, ಇದನ್ನು ಸದುಪಯೋಗ ಪಡಿಸಿಕೊಂಡು ಜಿಲ್ಲೆಗೆ ಕೀರ್ತಿಯನ್ನು ತರಲು ಕೋರಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಹಾಯಕ ಆಯುಕ್ತರಾದ ಶ್ರೀ ಕೆ.ಆರ್. ಸುರೇಶ್ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ವಿ.ಎಮ್. ನಾರಾಯಣಸ್ವಾಮಿ ಹಾಗೂ ಇನ್ನಿತರರು ಸೇವೆ ಸಲ್ಲಿಸಿದರು.

## ಮಧುಗಿರಿ

ದಿನಾಂಕ : 09-03-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ಮಧುಗಿರಿ ಜಿಲ್ಲಾ ಸಂಸ್ಥೆಯವತಿಯಿಂದ 4 ತಾಲ್ಲೂಕಿನ ಸರ್ಕಾರಿ ಅನುದಾನಿತ/ಅನುದಾನರಹಿತ ಪ್ರಾಥಮಿಕ ಶಾಲಾ ಮುಖ್ಯ ಶಿಕ್ಷಕರಿಗಾಗಿ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ಸಾಮಾನ್ಯ ಮಾಹಿತಿ ಶಿಬಿರವನ್ನು ಮಾಜಿ ರೋಟರಿ ರಾಜ್ಯಪಾಲರು ಹಾಗೂ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಹೆಚ್.ಕೆ.ವಿ. ರೆಡ್ಡಿ ಮತ್ತು ಶ್ರೀ ಬಿ.ಆರ್.ಸಿ. ಚಿತ್ತಯ್ಯ ರವರು ಉದ್ಘಾಟಿಸಿದರು. ಜಿಲ್ಲಾ ಸಂಸ್ಥೆಯ ಮುಖ್ಯ ಆಯುಕ್ತರಾದ ಶ್ರೀ ಭಾಸ್ಕರ್ ರೆಡ್ಡಿ ರವರು ಅಧ್ಯಕ್ಷತೆ ವಹಿಸಿದ್ದರು. ಇವರು ಪ್ರಾಸ್ತಾವಿಕ ನುಡಿಯಲ್ಲಿ ಸ್ಕೌಟ್ಸ್ ವಿದ್ಯಾರ್ಥಿಗಳಲ್ಲಿ ಶಿಸ್ತು, ಗುರುಹಿರಿಯರಲ್ಲಿ ಗೌರವ ಭಾವನೆ, ದೇಶಪ್ರೇಮ, ರಾಷ್ಟ್ರೀಯ ಭಾವೈಕ್ಯತೆ, ಸಮುದಾಯ ಅಭಿವೃದ್ಧಿಗಾಗಿ ಶ್ರಮಿಸುವ ಭಾವನೆಯನ್ನು ಬೆಳೆಸಲು ನಮ್ಮ ಸಂಸ್ಥೆ ಪೂರಕವಾಗಿದೆ ಎಂದು ಹೇಳಿದರು. ಉದ್ಘಾಟಕರಾದ ಶ್ರೀ ಹೆಚ್.ಕೆ.ವಿ. ರೆಡ್ಡಿ ಹಾಗೂ ಶ್ರೀ ಚಿತ್ತಯ್ಯರವರು ದೇಶಕ್ಕಾಗಿ ಕರ್ತವ್ಯ, ಇತರರಿಗೆ ಸಹಾಯ ಮಾಡುವುದು ಹಾಗೂ ಉತ್ತಮ ಸಮಾಜದ ನಿರ್ಮಾಪಕರನ್ನಾಗಿ ಮಾಡಬೇಕಾದರೆ ನಿಮ್ಮ ಶಾಲೆಯಲ್ಲಿ ಸ್ಕೌಟ್ಸ್ ಘಟಕ ಸ್ಥಾಪಿಸಿ ಮಕ್ಕಳಿಗೆ ಅನುಕೂಲ ಮಾಡಿ ಎಂದು ಕರೆ ನೀಡಿದರು. ಸ್ಕೌಟ್ಸ್ ಜಿಲ್ಲಾ ಆಯುಕ್ತರಾದ ಶ್ರೀ ಡಿ.ಎಸ್. ಸಿದ್ದಪ್ಪರವರು ಇದು ಸ್ವಯಂ ಸೇವಾ ಸಂಸ್ಥೆಯಾಗಿರುವುದುದರಿಂದ ನಾವು ತನು-ಮನವನ್ನು ಅರ್ಪಿಸಿ ಕೆಲಸ ಮಾಡಬೇಕಾಗಿರುತ್ತದೆ. ನಮ್ಮ ಮಕ್ಕಳಲ್ಲಿ ನಾಯಕತ್ವ ಗುಣ ಬೆಳಸುವಲ್ಲಿ ಈ ಸಂಸ್ಥೆಯು ಸಹಕಾರಿ ಎಂದು ತಿಳಿಸಿದರು.

ಸ್ಕೌಟಿಂಗ್ ಇತಿಹಾಸ, ಬೆಳೆದು ಬಂದ ದಾರಿ, ಎಡರು-ತೊಡರುಗಳು, ಸಂಸ್ಥಾಪಕರ ಬಗ್ಗೆ, ಉದ್ದೇಶ, ಮೂಲ ತತ್ವಗಳು, ಪ್ರತಿಜ್ಞೆ, ನಿಯಮ, ಧ್ಯೇಯ, ಅನುಕೂಲ, ಶಿಸ್ತು, ದಳ ರಚನೆ ಬಗ್ಗೆ ಮಾಹಿತಿ ನೀಡಲಾಯಿತು. 450 ಮುಖ್ಯ ಶಿಕ್ಷಕರು ಹಾಜರಿದ್ದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಸಾವಿತ್ರಮ್ಮ ಶಂಕರಯ್ಯ, ಜಿಲ್ಲಾ ಕೋಶಾಧಿಕಾರಿ ಶ್ರೀ ಜಿ. ಮಂಜುನಾಥ್, ಡಿ.ಸಿ(ಜಿ) ಶ್ರೀಮತಿ ಲತಾನಾರಾಯಣ್, ಡಿ.ಟಿ.ಸಿ., (ಜಿ) ಶ್ರೀಮತಿ ಹೇಮಾವತಿ ಉಪಸ್ಥಿತರಿದ್ದರು.

* ದಿನಾಂಕ 10-03-2016 ರಂದು ಪ್ರೌಢಶಾಲಾ ಮುಖ್ಯಶಿಕ್ಷಕರಿಗಾಗಿ ಏರ್ಪಡಿಸಿದ್ದ ಜಿಲ್ಲಾ ಮಟ್ಟದ ಸಾಮಾನ್ಯ ಮಾಹಿತಿ ಶಿಬಿರವನ್ನು ಡಿ.ಡಿ.ಪಿ.ಐ., ಹಾಗೂ ಮಧುಗಿರಿ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಸಿದ್ಧಗಂಗಯ್ಯ, ಸ್ಕೌಟ್ಸ್ ರಾಜ್ಯ ಆಯುಕ್ತರಾದ ಶ್ರೀ ಎಂ.ಎ. ಖಾಲಿದ್ ರವರು ಉದ್ಘಾಟನೆ ಮಾಡಿದರು. ಡಿ.ಡಿ.ಪಿ.ಐ., ರವರು

ಉದ್ಘಾಟನಾ ನುಡಿಯಲ್ಲಿ ಸ್ಕೌಟ್ಸ್ ಚಳವಳಿ ಕಿರಿಯರಲ್ಲಿ ರಾಷ್ಟ್ರೀಯ ಭಾವೈಕ್ಯತೆ, ರಾಷ್ಟ್ರಪ್ರೇಮ, ಶಿಸ್ತು, ದೇಶಕ್ಕೆ ಕರ್ತವ್ಯ, ಇತರರಿಗೆ ಸಹಾಯ ಮಾಡುವುದು ಹಾಗೂ ಉತ್ತಮ ಸಮಾಜದ ನಿರ್ಮಾಪಕರನ್ನಾಗಿ ಮಾಡುವುದಾಗಿದ್ದು ಎಲ್ಲರೂ ತಮ್ಮ ಶಾಲೆಯಲ್ಲಿ ಘಟಕ ತೆರೆದು ಮಕ್ಕಳನ್ನು ಸ್ಕೌಟ್ಸ್‌ಗೆ ಸೇರಿಸಿ ಎಂದು ಹೇಳಿದರು. ಶ್ರೀ ಖಾಲಿದ್ ರವರು ಸ್ಕೌಟ್ಸ್ ಜಾತಿ-ಬೇಧ, ರಾಜಕೀಯ ಯಾವುದೂ ಇಲ್ಲದ ಯುವ ಜನಾಂಗದ ಚಳವಳಿಯಾಗಿದ್ದು, ಒಮ್ಮೆ ಮಕ್ಕಳು ಸ್ಕೌಟ್ಸ್ ಸದಸ್ಯರಾದರೆ ಅವರು ರಾಜ್ಯ-ರಾಷ್ಟ್ರ-ಅಂತರಾಷ್ಟ್ರೀಯ ಮಟ್ಟದ ಸದಸ್ಯತ್ವ ಪಡೆದಂತೆ, ಎಲ್ಲಾ ಶಾಲೆಯಲ್ಲಿ ಸ್ಕೌಟ್ಸ್ ದಳ ಪ್ರಾರಂಭಿಸಿ ಮಕ್ಕಳನ್ನು ರಾಜ್ಯ ಪುರಸ್ಕಾರದೆಡೆಗೆ ಸಾಗಿಸುವಂತೆ ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಭಾಸ್ಕರ್ ರೆಡ್ಡಿರವರು ಸರ್ಕಾರಿ ಶಾಲಾ ಮಕ್ಕಳು ಈ ಚಳವಳಿಯಲ್ಲಿ ಹೆಚ್ಚಾಗಿ ಪಾಲ್ಗೊಳ್ಳದಿರಲು ಸ್ಕೌಟ್ಸ್ ಸಮವಸ್ತ್ರ ಕಾರಣವಿರಬಹುದು ಈ ಸಮಸ್ಯೆ ಬಗೆಹರಿಸಲು ಶ್ರಮಿಸುವುದಾಗಿ ಹಾಗೂ ಎಲ್ಲಾ ಶಾಲೆಗಳಲ್ಲಿ ದಳ ರಚನೆ ಮಾಡಲು ಕೋರಿದರು. ಡಿ.ಟಿ.ಸಿ., ಶ್ರೀ ಕೃಷ್ಣಮೂರ್ತಿ ವಂದಿಸಿದರು. ಕಾರ್ಯಕ್ರಮದಲ್ಲಿ ಪ್ರೌಢಶಾಲಾ ಮುಖ್ಯ ಶಿಕ್ಷಕರ ಸಂಘದ ಅಧ್ಯಕ್ಷರಾದ ಹನುಮಂತರಾಯಪ್ಪ, ಕಾರ್ಯದರ್ಶಿಗಳಾದ ಶ್ರೀ ಶಿವಕುಮಾರ್, ಡಿ.ಸಿ.,(ಎಸ್), ಶ್ರೀ ಡಿ.ಎಸ್. ಸಿದ್ದಪ್ಪ, ಡಿ.ಸಿ.(ಜಿ) ಶ್ರೀಮತಿ ಲತಾನಾರಾಯಣ್, ಜಂಟಿ ಡಿ.ಎಸ್.(ಜಿ.) ಶ್ರೀಮತಿ ಸವಿತಾ, ಡಿ.ಹೆಚ್.ಕ್ಯೂ.ಸಿ.(ಜಿ.) ಶ್ರೀಮತಿ ಶೈಲಜಾ, ಮಧುಗಿರಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ರಾಮದಾಸು, ಖಜಾಂಚಿ ಶ್ರೀ ಪುಟ್ಟಸ್ವಾಮಿ ಇನ್ನು ಮುಂತಾದವರು ಉಪಸ್ಥಿತರಿದ್ದರು. ಸುಮಾರು 150ಕ್ಕೂ ಹೆಚ್ಚು ಶಿಕ್ಷಕರು ಭಾಗವಹಿಸಿದ್ದರು.

ಶ್ರೀ ಎಲ್.ಟಿ. ಲೋಕೇಶ್, ರಾ.ತ.ಆ.(ಸ್ಕೌ), ಶ್ರೀ ಎನ್. ಶ್ರೀನಿವಾಸನ್, ಸ್ಥಾನಿಕ ಆಯುಕ್ತ, ಶ್ರೀಮತಿ ಎಸ್.ಕೆ. ಪ್ರಭಾ ರಾಜ್ಯ ಜಂಟಿ ಕಾರ್ಯದರ್ಶಿ (ಗೈ) ಶ್ರೀ ಗಂಗಾಧರಯ್ಯ, ಶ್ರೀ ಏಕಾಂತಯ್ಯ, ಸಂಪನ್ಮೂಲ ವ್ಯಕ್ತಿಗಳಾಗಿದ್ದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಶ್ರೀನಿವಾಸರೆಡ್ಡಿ ಎರಡು ದಿವಸದ ಕಾರ್ಯಕ್ರಮಗಳನ್ನು ನಿರ್ವಹಿಸಿದರು.

* ದಿನಾಂಕ 26-02-2016 ರಂದು ಮಧುಗಿರಿ ತಾಲ್ಲೂಕಿನ ದೊಡ್ಡೇರಿ ಹೋಬಳಿಯ ದಂಡಿನದಿಬ್ಬ ಗ್ರಾಮದ ಗುರುದೇವ ಗ್ರಾಮಾಂತರ ಪ್ರೌಢಶಾಲೆಯಲ್ಲಿ ಸ್ಕೌಟ್ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೋವೆಲ್ ರವರ ಜಯಂತಿಯನ್ನು ಆಚರಣೆ ಮಾಡಲಾಯಿತು. ಕಾರ್ಯಕ್ರಮದ ಉದ್ಘಾಟನೆಯನ್ನು ಸ್ಕೌಟ್ ಮುಖ್ಯ ಆಯುಕ್ತರಾದ ಶ್ರೀ ಭಾಸ್ಕರ್ ರೆಡ್ಡಿ, ಜಿಲ್ಲಾ ಕಾರ್ಯದರ್ಶಿ ಶ್ರೀನಿವಾಸರೆಡ್ಡಿ, ಡಿ.ಓ.ಸಿ., ಶ್ರೀ ವಿನಯಕುಮಾರ್, ತರಬೇತಿ ಸಲಹೆಗಾರರಾದ ಶ್ರೀ ವರದರಾಜು. ವಿ.ಜಿ. ಹೆಚ್.ಡಬ್ಲ್ಯೂ.ಬಿ. ಮತ್ತು ಶಾಲಾ ಸಿಬ್ಬಂದಿಯವರು ನೆರವೇರಿಸಿದರು. ಈ ಸಂದರ್ಭದಲ್ಲಿ ಗ್ರಾಮಸ್ಥರು ಹಾಜರಿದ್ದರು.

ಶ್ರೀ ಭಾಸ್ಕರ್ ರೆಡ್ಡಿರವರು ಉದ್ಘಾಟನಾ ನುಡಿ ಹೇಳಿದರು. ಶ್ರೀ ಶ್ರೀನಿವಾಸರೆಡ್ಡಿ ಸ್ಕೌಟ್ಸ್-ಗೈಡ್ಸ್ ಮಹತ್ವ ಮತ್ತು ಅನುಕೂಲಗಳ ಬಗ್ಗೆ ಹೇಳಿದರು, ಸ್ಕೌಟ್ ಸಂಸ್ಥಾಪಕರ ಬಗ್ಗೆ ಡಿ.ಓ.ಸಿ., ಶ್ರೀ ವಿನಯಕುಮಾರ್ ತಿಳಿಸಿದರು ಮತ್ತು ಮುಖ್ಯ ಶಿಕ್ಷಕರಾದ ಮಹಂತೇಶ್. ಜಿ.ಪಿ ರವರು ಅಧ್ಯಕ್ಷರ ಭಾಷಣ ಮಾಡಿದರು. ಶಿಕ್ಷಕರಾದ ಮಧುಸೂದನ್ ನಿರೂಪಿಸಿದರು. ಶ್ರೀಮತಿ ಉಷಾದೇವಿ ಸ್ವಾಗತಿಸಿದರು, ಜಯರಾಮೇಗೌಡರು ವಂದಿಸಿರು.

## ರಾಯಚೂರು

ಸ್ಕೌಟ್ಸ್ ಸಂಸ್ಥಾಪಕ ಬೇಡನ್ ಪೋವೆಲ್, ಲೇಡಿ ಬೇಡನ್ ಪೋವೆಲ್ ಅವರ ಆದರ್ಶಗಳನ್ನು ಪ್ರತಿಯೊಬ್ಬರೂ ಅಳವಡಿಸಿಕೊಳ್ಳಬೇಕು ಎಂದು ಸ್ಕೌಟ್ಸ್ ಸಂಸ್ಥೆಯ ಜಿಲ್ಲಾ ಸಹಾಯಕ ಆಯುಕ್ತ ಶ್ರೀ ಬಸವರಾಜ್ ಬೊರೆಡ್ಡಿ ಹೇಳಿದರು.

ದಿನಾಂಕ 22-01-2016ರಂದು ನಗರದ ಸ್ಕೌಟ್ಸ್ ಭವನದಲ್ಲಿ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಏರ್ಪಡಿಸಿದ್ದ ಸ್ಕೌಟ್ ಸಂಸ್ಥಾಪಕ ಬೇಡನ್ ಪೋವೆಲ್ ಅವರ ಜನ್ಮ ದಿನಾಚರಣೆಯ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು. ವಿದ್ಯಾರ್ಥಿ ಜೀವನದಲ್ಲಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ತೊಡಗುವುದರಿಂದ ಜೀವನದಲ್ಲಿ ಶಿಸ್ತು ಹಾಗೂ ಸಂಯಮ

ಮೂಡಲು ಸಾಧ್ಯವಾಗುತ್ತದೆ. ಸದಾಕಾಲ ದೇಶ ಪ್ರೇಮವನ್ನು ಜಾಗೃತಗೊಳಿಸುವ ಸಂಸ್ಥೆಯನ್ನು ಕಟ್ಟಿದ ಬೇಡನ್ ಪೊವೆಲ್ ಎಲ್ಲರಿಗೂ ಆದರ್ಶಪ್ರಾಯ ಎಂದರು.

* ಸ್ಕೌಟ್ಸ್-ಗೈಡ್ಸ್‌ಗಳು ಸಮಾಜದಲ್ಲಿ ಪ್ರಾಮಾಣಿಕತೆಯಿಂದ ಎಲ್ಲ ಚಟುವಟಿಕೆಗಳಲ್ಲಿ ಪಾಲ್ಗೊಂಡು ಶಿಸ್ತಿನಿಂದ ಸೇವೆ ಸಲ್ಲಿಸುವುದರೊಂದಿಗೆ ದೇಶಕ್ಕೆ ಮಾದರಿಯಾಗಿರುವುದು ಹೆಮ್ಮೆಯ ಸಂಗತಿಯಾಗಿದೆ ಎಂದು ಮಾನವಿ ಶಾಸಕ ಶ್ರೀ ಹಂಪಯ್ಯ ನಾಯಕ ಇವರು ಅಭಿಪ್ರಾಯ ಪಟ್ಟರು. ಮಾನವಿ ಪಟ್ಟಣದ ಕಾಕತೀಯ ಶಿಕ್ಷಣ ಸಂಸ್ಥೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ ರಾಯಚೂರು ಹಾಗೂ ಭಾರತ್ ಸ್ಕೌಟ್ಸ-ಗೈಡ್ಸ ಸ್ಥಳೀಯ ಸಂಸ್ಥೆ, ಮಾನವಿ ಇವರುಗಳ ಸಹಯೋಗದಲ್ಲಿ ದಿನಾಂಕ 12-03-2016 ರಿಂದ 13-03-2016 ರ ವರೆಗೆ ಹಮ್ಮಿಕೊಂಡಿದ್ದ ಎರಡು ದಿನಗಳ ಸ್ಕೌಟ್ಸ್-ಗೈಡ್ಸ್‌ಗಳ ಜಿಲ್ಲಾ ಮೇಳ-2016 ರ ಸಮಾರೋಪದಲ್ಲಿ ವಿಶೇಷ ಆಹ್ವಾನಿತರಾಗಿ ಭಾಗವಹಿಸಿ ಮಾತನಾಡಿದರು.

ಸಮಾರೋಪ ಸಮಾರಂಭದ ಮುಖ್ಯ ಅತಿಥಿಗಳಾಗಿ ಭಾಗವಹಿಸಿ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಡಾ॥ ಬಸವ ಪ್ರಭು ಪಾಟೀಲ್ ಬೆಟ್ಟದುರು ಇವರು ಮಾತನಾಡಿ, ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಪ್ರತಿಯೊಬ್ಬ ವ್ಯಕ್ತಿಯನ್ನು ವೈಯಕ್ತಿಕವಾಗಿ, ಜವಾಬ್ದಾರಿಯುತ ಪ್ರಜೆಗಳಾಗಿ ಹಾಗೂ ಸ್ಥಳೀಯ, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಸಮುದಾಯದ ಸದಸ್ಯರಾಗಿ ಅದಲ್ಲದೆ ಶಾರೀರಿಕ, ಮಾನಸಿಕ, ಸಾಮಾಜಿಕ, ಭಾವನಾತ್ಮ, ಆಧ್ಯಾತ್ಮಿಕವಾಗಿ ಹಾಗು ಪಾರಮಾರ್ಥಿಕವಾಗಿ ಒಬ್ಬ ಉತ್ತಮ ಪ್ರಜೆಯಾಗಿ ಮಾಡುತ್ತಿರುವ ಸಂಸ್ಥೆಯ ಕಾರ್ಯ ಶ್ಲಾಘನೀಯವಾಗಿದೆ ಎಂದರು.

ಎರಡು ದಿನದ ಜಿಲ್ಲಾ ಮೇಳದಲ್ಲಿ ಭಾಗವಹಿಸಿರುವ ಸ್ಕೌಟ್ಸ-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್, ರೋವರ್ಸ್-ರೇಂಜರ್ಸ್‌ಗಳಿಗಾಗಿ ಸ್ವಚ್ಚ ಭಾರತಕ್ಕೆ ಸಂಬಂಧಿಸಿ ಚಿತ್ರಕಲೆಸ್ಪರ್ಧೆ, ವಸ್ತು ಪ್ರದರ್ಶನ, ಕರ-ಕೌಶಲ ಸ್ಪರ್ಧೆ, ಆಹಾರ ಮೇಳ, ಪಂಚೇಂದ್ರಿಯಗಳ ಆಟ, ಶಿಬಿರಾಗ್ನಿ, ಪಥ ಸಂಚಲನೆ ವಿವಿದ ಮೋಜಿನ ಸ್ಪರ್ಧೆಗಳನ್ನು ಆಯೋಜನೆ ಮಾಡಲಾಗಿತ್ತು. ಈ ಮೇಳದಲ್ಲಿ ಜಿಲ್ಲೆಯ ಎಲ್ಲ ತಾಲ್ಲೂಕಿನಿಂದ ಒಟ್ಟು 650 ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಕೆ. ತಿಮ್ಮಯ್ಯ ಜಿಲ್ಲಾ ಮುಖ್ಯ ಆಯುಕ್ತರು ಇವರು ವಹಿಸಿ ಮಾತನಾಡಿ, ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಉತ್ತಮ ಸಂಸ್ಕಾರವನ್ನು ಬೆಳೆಸಲು ಪ್ರತಿಯೊಬ್ಬರು ಪ್ರಯತ್ನಪಡಬೇಕಾಗಿದೆ. ಅದರಲ್ಲು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಸದಾ ಪರಿಶ್ರಮ ವಹಿಸಿ ಇಂಥ ಕಾರ್ಯಕ್ರಮಗಳಲ್ಲಿ ಮಕ್ಕಳಿಗೆ ಅವಕಾಶ ಕಲ್ಪಿಸಿಕೊಡುತ್ತಿದೆ ಇದಕ್ಕೆ ಎಲ್ಲರ ಸಹಕಾರ ಅವಶ್ಯಕವಾಗಿದೆ ಎಂದರು. ಈ ಸಮಾವೇಶಕ್ಕೆ ಸಹಕರಿಸಿದ ಎಲ್ಲರಿಗೆ ಕೃತಜ್ಞತೆಯನ್ನು ಸಲ್ಲಿಸಿದರು.

ಈ ಕಾರ್ಯಕ್ರಮದ ವೇದಿಕೆಯಲ್ಲಿ ಶ್ರೀ ಬಿ. ಬಲರಾಮಕೃಷ್ಣ ಅಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ ಮಾನವಿ, ಶ್ರೀಮತಿ ಶಾರದಾ ನಾಗೇಶ ಅಧ್ಯಕ್ಷರು ಪುರಸಭೆ ಮಾನವಿ, ಶ್ರೀ ಎಸ್. ಶರಣೇಗೌಡ ಅಧ್ಯಕ್ಷರು, ಭಾರತ್ ಸ್ಕೌಟ್ಸ-ಗೈಡ್ಸ್, ಸಿಂಧನೂರು, ಶ್ರೀ ಪಿ. ಪ್ರಸಾದ ಅದ್ಯಕ್ಷರು, ಕಾಕತೀಯ ಶಿಕ್ಷಣ ಸಂಸ್ಥೆ, ಮಾನವಿ, ಶ್ರೀಮತಿ ಅಜೀಜಾ ಸುಲ್ತಾನ ಜಿಲ್ಲಾ ಆಯುಕ್ತರು, ಶ್ರೀಮತಿ ಕೆ. ಆಲಿಯಾಖಾನಂ ಜಿಲ್ಲಾ ಕೋಶಾಧಿಕರಿಗಳು, ಶ್ರೀ ಸಂತೋಷ ಜೈನ್, ಶ್ರೀ ಮಹಾವೀರ ಜೈನ್, ಶ್ರೀ ಆರ್.ಸಿ. ಪಾಟೀಲ್, ಸಿಂಡಿಕೇಟ್ ಸದಸ್ಯರು, ಮಹಿಳಾ ವಿಶ್ವವಿದ್ಯಾಲಯ, ವಿಜಯಪುರ, ಶ್ರೀ ಎಮ್. ರಾಮಕೃಷ್ಣ, ಶ್ರೀಮತಿ ಸರೋಜಾ ಗುಮ್ಮಾ, ಡಾ॥ ದೇವೇಂದ್ರ ದುರ್ಗದ ಹಾಗೂ ಇನ್ನಿತರರು ಉಪಸ್ಥಿತರಿದ್ದರು. ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಇವರು ಪ್ರಾಸ್ತಾವಿಕವಾಗಿ ಮಾತನಾಡಿದರು. ಶ್ರೀಮತಿ ರಜನಿ ಡಿ. ಗೈಡ್ ಕ್ಯಾಪ್ಟನ್ ಇವರು ಸ್ವಾಗತಿಸಿದರು. ಶ್ರೀ ನರಸಿಂಹಮೂರ್ತಿ ದೇಸಾಯಿ ಸ್ಕೌಟ್ ಮಾಸ್ಟರ್ ವಂದಿಸಿದರು. ಶ್ರೀ ರಾಮಲಿಂಗಪ್ಪ ಎಮ್. ಕಾರ್ಯಕ್ರಮ ನಿರೂಪಿಸಿದರು.

* ದಿನಾಂಕ 29-02-2016 ರಂದು ರಾಯಚೂರು ತಾಲೂಕಿನ ಕಲ್ಮಲಾ ಸರ್ಕಾರಿ ಪ್ರೌಢಶಾಲೆಯಲ್ಲಿ ಗೈಡ್ ಘಟಕದ ದೀಕ್ಷಾ ಸಮಾರಂಭವನ್ನು ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಆರ್. ಹೆಚ್. ಸಾಗರ್ ಇವರು

ಉದ್ಘಾಟಿಸಿದರು. ಅವರು ಮಾತನಾಡಿ, ಸ್ಕೌಟ್ಸ್-ಗೈಡ್ಸ್ ಚಳವಳಿ ಪ್ರತಿಯೊಬ್ಬರಿಗೆ ತಮ್ಮ ವ್ಯಕ್ತಿತ್ವ ವಿಕಸನ ವೃದ್ಧಿಸುವುದರ ಜೊತೆಗೆ ಜೀವನ ಕೌಶಲ್ಯಕ್ಕೆ ಪೂರಕವಾಗಿದ್ದು ಇದನ್ನು ಪ್ರತಿಯೊಬ್ಬರು ತಮ್ಮ ಜಿವನದಲ್ಲಿ ಅಳವಡಿಸಿಕೊಳ್ಳಲು ಸಲಹೆ ನೀಡಿದರು.

ಮುಖ್ಯ ಅತಿಥಿಗಳಾಗಿ ಶ್ರೀ ರಾವುತರಾವ್ ಬರೂರ ಜಿಲ್ಲಾ ಸಂಘಟನಾ ಆಯುಕ್ತರು ಇವರು ಭಾಗವಹಿಸಿ ಮಾತನಾಡಿ, ಶಾಲೆಗಳಲ್ಲಿ ಮಕ್ಕಳು ಬಹಳಷ್ಟು ಆಸಕ್ತಿಯಿಂದ ಘಟಕಗಳಿಗೆ ಸೇರುತ್ತಿದ್ದು, ಅವರಿಗೆ ತರಬೇತಿ ಪಡೆದ ಶಿಕ್ಷಕರು ಸರಿಯಾದ ರೀತಿಯ ಮಾರ್ಗದರ್ಶನ ನೀಡಿ ಅವರನ್ನು ಉತ್ತಮ ಸ್ಥಾನದ ಗುರಿ ಮುಟ್ಟಲು ಪ್ರಾಮಾಣಿಕ ಪ್ರಯತ್ನ ಮಾಡಲು ಸಲಹೆ ನೀಡಿದರು. ಇದೇ ಸಂದರ್ಭದಲ್ಲಿ ಗೈಡ್ಸ್‌ಗಳ ಕರ ಕೌಶಲ ವಸ್ತುಗಳ ಪ್ರದರ್ಶನ ಏರ್ಪಡಿಸಿದ್ದರು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶಾಲೆಯ ಪ್ರಭಾರ ಮುಖ್ಯ ಗುರುಗಳಾದ ಶ್ರೀಮತಿ ಪರಿಮಳಾ ಇವರು ವಹಿಸಿ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸೇರಿರುವ ಮಕ್ಕಳು ಬಹಳಷ್ಟು ಆಸಕ್ತಿಯಿಂದ ಪಾಲ್ಗೊಂಡು ಶಿಸ್ತು, ಸೇವಾ ಮನೋಭಾವ ಬೆಳೆಸಿಕೊಳ್ಳುತ್ತ ಇತರರಿಗೆ ಮಾದರಿಯಾಗಿದ್ದಾರೆ ಎಂದರು. ಶಾಲೆಯ ಗೈಡ್ ಶಿಕ್ಷಕಿ ಶ್ರೀಮತಿ ವಿಜಯಲಕ್ಷ್ಮೀ ಇವರು ಪ್ರಾಸ್ತಾವಿಕವಾಗಿ ಮಾತನಾಡಿ ಎಲ್ಲರನ್ನು ಸ್ವಾಗತಿಸಿದರು. ಈ ಕಾರ್ಯಕ್ರಮದಲ್ಲಿ ಶ್ರೀಮತಿ ಶಶಿರೇಖಾ ಸಹ ಶಿಕ್ಷಕಿ ಹಾಗೂ ಶಾಲೆಯ ಶಿಕ್ಷಕರ ವೃಂದದವರು ಮತ್ತು ಶಾಲಾ ವಿದ್ಯಾರ್ಥಿಗಳು ಭಾಗವಹಿಸಿದ್ದರು.

## ಶಿವಮೊಗ್ಗ

ದಿನಾಂಕ 29-02-2016 ರಂದು ಜಿಲ್ಲಾ ಪುರಸ್ಕಾರ ಪ್ರಶಸ್ತಿ ಪ್ರಧಾನ ಸಮಾರಂಭ ಹಾಗೂ ದಿ॥ ಕೆ.ಪಿ. ಮಹದೇವಪ್ಪ, ವಕೀಲರು, ಮಾಜಿ ಆಯುಕ್ತರು ಇವರ ಜನ್ಮ ದಿನಾಚರಣೆಯನ್ನು ಶಿವಮೊಗ್ಗ ನಗರದ ಅಂಬೇಡ್ಕರ್ ಭವನದಲ್ಲಿ ಆಚರಣೆ ಮಾಡಲಾಯಿತು. ಜಿಲ್ಲಾ ಆಯುಕ್ತರು (ಗೈಡ್ಸ್) ಆದ ಶ್ರೀಮತಿ ಎಸ್.ಆರ್. ವಿಜಯಲಕ್ಷ್ಮೀಯವರು ಸ್ವಾಗತಿಸಿದರು. ಶ್ರೀ ಎಸ್. ಉಮೇಶ್ ಶಾಸ್ತ್ರಿ, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಇವರು ಶ್ರೀ ದಿ॥ ಕೆ.ಪಿ. ಮಹದೇವಪ್ಪನವರ ಬಗ್ಗೆ ಎಲ್ಲರಿಗು ಕಿರುಪರಿಚಯವನ್ನು ಮಾಡಿ ನಂತರ ಅವರು ಸ್ಕೌಟಿಂಗ್ ಮತ್ತು ಗೈಡಿಂಗ್‌ನಲ್ಲಿ ಬೆಳೆದು ಬಂದ ದಾರಿಯನ್ನು ಹಾಗೂ ಜಿಲ್ಲಾ ಸಂಸ್ಥೆಗೆ ಮಾಡಿದ ಸೇವೆಯನ್ನು ನೆನೆದರು. ಜಿಲ್ಲಾದಿಕಾರಿಗಳು, ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಹಾಗೂ ಅವರ ಕುಟುಂಬದವರು ಎಲ್ಲರೂ ಸೇರಿ ದೀಪವನ್ನು ಬೆಳಗಿಸಿ ಭಾವಚಿತ್ರಕ್ಕೆ ಪುಷ್ಪವನ್ನು ಅರ್ಪಿಸಿದರು.

ಪ್ರಾಸ್ತಾವಿಕ ನುಡಿಯನ್ನು ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ.ಬಿಂದುಕುಮಾರ್ ನುಡಿದರು. ನಂತರ ಶ್ರೀ ವಿ.ಪಿ. ಇಕ್ಕೇರಿ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಇವರು ಜಿಲ್ಲಾ ಪುರಸ್ಕಾರ್ ಪಡೆದ 560 ಸ್ಕೌಟ್ಸ್, 570 ಗೈಡ್ಸ್, ಹಾಗೂ 120 ಕಬ್ಸ್, 140 ಬುಲ್‌ಬುಲ್ಸ್‌ಗಳಿಗೆ ಪ್ರಶಸ್ತಿ ಪತ್ರವನ್ನು ನೀಡಿದರು. ನಂತರ ಅವರು ಮಾತನಾಡುತ್ತಾ ಮಕ್ಕಳು ಮಾನಸಿಕವಾಗಿ, ದೈಹಿಕವಾಗಿ ಸಧೃಡರಾಗಿ ಸಮಾಜದ ಮುಖ್ಯವಾಹಿನಿಗೆ ಬರಲು ಪ್ರಾಥಮಿಕ ಹಂತದಲ್ಲಿ ಇಂತಹ ಚಟುವಟಿಕೆಗಳಲ್ಲಿ ಅತ್ಯಂತ ಕ್ರಿಯಾಶೀಲರಾಗಿ ಭಾಗವಹಿಸಿದಾಗ ಮಾತ್ರ ಯಶಸ್ವಿಯಾಗಿ ಮುಂದೆ ಬರುತ್ತಾರೆ ಎಂದು ತಿಳಿಸಿದರು. ನಂತರ ಕೆ.ಪಿ. ಮಹದೇವಪ್ಪ ನವರ ಧರ್ಮಪತ್ನಿಯವರನ್ನು ಸನ್ಮಾನಿಸಲಾಯಿತು. ಅವರ ಮಗಳು ತಂದೆಯವರ ಜನ್ಮದಿನೋತ್ಸವ ಆಚರಣೆಯ ಬಗ್ಗೆ ಜಿಲ್ಲಾ ಸಂಸ್ಥೆಗೆ ಕೃತಜ್ಞತೆಗಳನ್ನು ಸೂಚಿಸಿದರು.

ಇದೇ ಸಂದರ್ಭದಲ್ಲಿ ಜಿಲ್ಲಾ ಖಜಾಂಚಿಯಾದ ಶ್ರೀ ಪರಮೇಶ್ವರ್ ರವರ ಜನ್ಮದಿನವಾದ್ದರಿಂದ ಅವರಿಗೆ ಹುಟ್ಟುಹಬ್ಬದ ಶುಭ ಹಾರೈಸಲಾಯಿತು. ನಂತರ ಜಿಲ್ಲಾಧಿಕಾರಿಗಳಿಗೆ ಧನ್ಯವಾದ ಪದಕವನ್ನು ಜಿಲ್ಲಾ ಪ್ರಧಾನ ಆಯುಕ್ತರಾದ ಶ್ರೀ ಎಚ್.ಡಿ. ರಮೇಶ್ ಶಾಸ್ತ್ರಿ ನೀಡಿದರು. ನಂತರ ಅವರು ತಮ್ಮ ಭಾಷಣದಲ್ಲಿ ಪ್ರಶಸ್ತಿ

ಭಾಜನರಾದವರೆಲ್ಲರಿಗೂ ಶುಭ ಹಾರೈಸಿದರು. ಕಾರ್ಯಕ್ರಮದಲ್ಲಿ ಶ್ರೀ ಗುರುರಾಜ್ ಗಿರಿಮಾಜಿ, ಜಿಲ್ಲಾ ಉಪಾಧ್ಯಕ್ಷರು, ಶ್ರೀಮತಿ ಶಕುಂತಲಾ ಚಂದ್ರಶೇಖರ್ ಜಿಲ್ಲಾ ಉಪಾಧ್ಯಕ್ಷರು, ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಆರ್.ಕೆ. ರಾಮ್‌ಸಿಂಗ್, ಶ್ರೀ ಬಿ.ಸಿ. ವೇಣುಗೋಪಾಲ ಎ.ಡಿ.ಸಿ., ಉಪಸ್ಥಿತರಿದ್ದರು.

ಕಾರ್ಯಕ್ರಮದಲ್ಲಿ ಸುಮಾರು 560 ಸ್ಕೌಟ್ಸ್, 570 ಗೈಡ್ಸ್, ಸುಮಾರು 250 ಕಬ್-ಬುಲ್‌ಬುಲ್‌ಗಳು ಮತ್ತು ಎಲ್ಲಾ ಸ್ಥಳೀಯ ಕಾರ್ಯದರ್ಶಿಗಳು, ಸ್ಕೌಟ್-ಗೈಡ್ ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

* ದಿನಾಂಕ 22-02-2016 ರಂದು ಜಿಲ್ಲಾ ಸಂಸ್ಥೆ ಮತ್ತು ಶಿವಮೊಗ್ಗ ತಾಲ್ಲೂಕು ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ಸ್ಕೌಟ್ ಭವನದಲ್ಲಿ ಬೇಡನ್ ಪೊವೆಲ್ ಹಾಗೂ ಲೇಡ್ ಬೇಡನ್ ಪೊವೆಲ್ ರವರ ಜನ್ಮದಿನವನ್ನು ಆಚರಣೆ ಮಾಡಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ಜಿಲ್ಲಾ ಪ್ರಧಾನ ಆಯುಕ್ತರು ವಹಿಸಿದ್ದರು. ಈ ಕಾರ್ಯಕ್ರಮದಲ್ಲಿ ಸುಮಾರು 80 ಸ್ಕೌಟ್, 120 ಗೈಡ್‌ಗಳು ಭಾಗವಹಿಸಿದ್ದರು. ಕು॥ ಪ್ರಿಯಾಂಕ ಜಿಲ್ಲಾ ಸಂಘಟಕರು ಸ್ವಾಗತಿಸಿದರು. ನಂತರ ಬಿ.ಪಿ.ಯವರ ಭಾವಚಿತ್ರಕ್ಕೆ ಪುಷ್ಪವನ್ನು ಅರ್ಪಿಸಿ, ದೀಪವನ್ನು ಬೆಳಗಿಸಲಾಯಿತು. ಶ್ರೀ ಆರ್.ಕೆ. ರಾಮ್‌ಸಿಂಗ್, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರು ಇವರು ಪ್ರಾಸ್ತಾವಿಕ ನುಡಿಗಳನ್ನು ಹೇಳುತ್ತಾ ತಮ್ಮ ಜೀವನದ ಸ್ಕೌಟಿಂಗ್‌ನ್ನು ನೆನೆದರು.

* ದಿನಾಂಕ 11-03-2016 ರಂದು ಸ.ಹಿ.ಪ್ರಾ.ಪಾ.ಶಾಲೆ, ಸೂಳೆಬೈಲು ವಾಸವಿ ಶಾಲೆಯ ಸ್ಕೌಟ್-ಗೈಡ್‌ಗಳು ಬೇಡನ್ ಪೋವೆಲ್ ಹಾಗು ಲೇಡಿ ಬೇಡನ್ ಪೊವೆಲ್‌ರವರ ಬಗ್ಗೆ ಅನಿಸಿಕೆಗಳನ್ನು ಹಂಚಿಕೊಂಡರು. ಶ್ರೀ ಉಮೇಶ್ ಶಾಸ್ತ್ರಿ, ಜಿಲ್ಲಾ ಆಯುಕ್ತರು (ಸ್ಕೌಟ್) ಇವರು ಬಿ.ಪಿ.ಯವರ ಹುಟ್ಟುಹಬ್ಬದ ಶುಭಾಶಯಗಳನ್ನು ಹೇಳಿ ಅವರ ಜೀವನದ ದಾರಿಯನ್ನು ಹಾಗು ಸ್ಕೌಟಿಂಗ್ ಮತ್ತು ಗೈಡಿಂಗ್‌ನಲ್ಲಿ ತಮ್ಮನ್ನು ತಾವು ಹೇಗೆ ತೊಡಗಿಸಿಕೊಂಡಿದ್ದರೆಂದು ತಿಳಿಸಿಕೊಟ್ಟರು.

ಶ್ರೀ ವಿಜಯಲಕ್ಷ್ಮಿ ಎಸ್.ಆರ್. ಜಿಲ್ಲಾ ಆಯುಕ್ತರು (ಗೈಡ್ಸ್) ಇವರು ಮಕ್ಕಳಿಗೆ ರಸ ಪ್ರಶ್ನೆಯನ್ನು ಕೇಳುವುದರ ಮೂಲಕ ಬಿ.ಪಿಯವರ ಹಾಗೂ ಲೇಡಿ ಬಿ.ಪಿ.ಯವರ ಕಿರುಪರಿಚಯ ಹಾಗೂ ಸಾಧನೆಗಳನ್ನು ತಿಳಿಸಿದರು. ನಂತರ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ಹೆಚ್.ಡಿ. ರಮೇಶ್ ಶಾಸ್ತ್ರಿ ಜಿಲ್ಲಾ ಪ್ರಧಾನ ಆಯುಕ್ತರು, ಬಿ.ಪಿ.ಯವರ ಬಗ್ಗೆ ಮಾತನಾಡುತ್ತ ಬಿ.ಪಿ. ಮತ್ತು ಲೇಡಿ ಬಿ.ಪಿ. ಯವರ ಇಬ್ಬರ ಹುಟ್ಟು ಹಬ್ಬ ಒಂದೇ ದಿನ ಆದರೆ ಇಸವಿಗಳು ಬೇರೆ. ಚಿಂತನ ದಿನದಂದು ಪ್ರತಿಯೊಬ್ಬರೂ ಒಂದು ಹೊಸ ಚಿಂತನೆಯನ್ನು ಮಾಡುವುದರ ಮೂಲಕ ಆ ಪ್ರಕಾರವೇ ನಡೆಯಬೇಕೆಂದು ಹೇಳಿದರು.

## ತುಮಕೂರು

ದಿನಾಂಕ 05-02-2016 ರಿಂದ 08-02-2016 ರ ವರೆಗೆ ತಿಪಟೂರು ಸ್ಕೌಟ್ಸ್ ಕೇಂದ್ರದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಾವೀಣ್ಯತಾ ಪದಕ ತರಬೇತಿ ಶಿಬಿರ ಹಮ್ಮಿಕೊಳ್ಳಲಾಗಿತ್ತು. ದಿನಾಂಕ 05-02-2016 ರಂದು ನಡೆದ ಉದ್ಘಾಟನಾ ಸಮಾರಂಭದಲ್ಲಿ ಶ್ರೀ ನಂಜುಂಡ ಸ್ವಾಮಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು ವೇದಿಕೆ ಮೇಲಿನ ಗಣ್ಯರನ್ನು ಸ್ವಾಗತಿಸಿದರು. ಶ್ರೀ ಸುರೇಂದ್ರ ಷಾ, ಜಿಲ್ಲಾ ಕಾರ್ಯದರ್ಶಿಯವರು ಉದ್ಘಾಟನೆ ಮಾಡಿದರು. ಅಧ್ಯಕ್ಷತೆಯನ್ನು ಶ್ರೀ ನಂದಕುಮಾರ್, ಅಧ್ಯಕ್ಷರು ಸ್ಥಳೀಯ ಸಂಸ್ಥೆ ವಹಿಸಿದ್ದರು. ಅತಿಥಿಗಳಾಗಿ ಶ್ರೀ ಸದಾಶಿವರಾವ್ ಛೇರ್‌ಮನ್ ಸ್ಥಳೀಯ ಸಂಸ್ಥೆ, ತಿಪಟೂರು ಇವರು ಭಾಗವಹಿಸಿದ್ದರು. ಸುಮಾರು 170 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.

* ದೇಶಭಕ್ತಿ, ಶಿಸ್ತು, ಶ್ರದ್ಧೆ ಹಾಗೂ ಜೀವನದಲ್ಲಿ ಉತ್ತಮ ನಾಗರೀಕನಾಗಿ ಬೆಳೆಯಲು ಸ್ಕೌಟ್ಸ್-ಗೈಡ್ಸ್ ಸಹಕಾರಿ ಎಂದು ಕ್ಷೇತ್ರ ಶಿಕ್ಷಣಾಧಿಕಾರಿ ಶ್ರೀ ಪ್ರಭುಸ್ವಾಮಿ ತಿಳಿಸಿದರು. ದಿನಾಂಕ 08-02-2016 ರಂದು ನಗರದ ಗುರುಲೀಲಾ

ಕಲ್ಯಾಣ ಮಂಟಪದಲ್ಲಿ ನಡೆದ 29ನೇ ತಾಲ್ಲೂಕು ಮಟ್ಟದ ಸ್ಕೌಟ್ಸ್-ಗೈಡ್ಸ್ ಕ್ಲಬ್ ಬುಲ್-ಬುಲ್ ಮೇಳದ ಸಮಾರೋಪ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು ಸಮಾಜದಲ್ಲಿ ವ್ಯಕ್ತಿ ಉತ್ತಮ ನಾಗರೀಕನಾಗಿ ಬೆಳೆಯಲು ಸ್ಕೌಟ್ಸ್ ಮತ್ತು ಗೈಡ್ಸ್ ಅವಶ್ಯಕವಾಗಿದ್ದು, ಈ ಸಂಸ್ಥೆಯನ್ನು ಎಲ್ಲಾ ಕಡೆಗಳಲ್ಲೂ ಸ್ಥಾಪಿಸಬೇಕು ಎಂದರು.

ಸಂಸ್ಥೆಯ ಅಧ್ಯಕ್ಷರಾದ ಶ್ರೀ ಜಿ. ನಂದಕುಮಾರ್ ಮಾತನಾಡಿ ಬೇಡನ್ ಪೊವೆಲ್‌ರ ಹುಟ್ಟು ಹಬ್ಬದ ನೆನಪಿಗಾಗಿ ರ್‍ಯಾಲಿ ಮಾಡುವ ಉದ್ದೇಶವಿದ್ದು, ಪ್ರತಿಯೊಬ್ಬರು ಶಿಸ್ತಿನ ಸಿಪಾಯಿಯಂತಿರಬೇಕು, ಶಿಕ್ಷಕರು ತರಬೇತಿದಾರರೊಡನೆ ಸ್ನೇಹಿತರಂತೆ ವರ್ತಿಸಬೇಕು. ಮುಂದೆ ಮೈಸೂರಿನಲ್ಲಿ ಅಕ್ಟೋಬರ್ ನಲ್ಲಿ ನಡೆಯಲಿರುವ ರಾಷ್ಟ್ರೀಯ ಜಾಂಬೂರಿಯಲ್ಲಿ ಎಲ್ಲರು ಭಾಗವಹಿಸಬೇಕು ಎಂದರು.

ಕ್ಷೇತ್ರ ಸಂಪನ್ಮೂಲ ಅಧಿಕಾರಿ ಶ್ರೀ ಕಾಂತರಾಜು ಮಾತನಾಡಿ ದೇಶದ ರಕ್ಷಣೆಗೆ ಯುವಕರನ್ನು ಬೆಳೆಸುವ ಮಾರ್ಗದರ್ಶನದ ಶಿಸ್ತುಬದ್ಧ ಸಂಸ್ಥೆಯಾಗಿದೆ. ಪ್ರಾಥಮಿಕ ಶಾಲಾ ಹಂತದಿಂದ ಇದರ ಉಪಯೋಗ ಪಡೆದರೆ ಜೀವನಕ್ಕೆ ಮಾರ್ಗವಾಗುತ್ತದೆ ಎಂದರು. ಕುಮಾರ್ ಆಸ್ಪತ್ರೆಯ ವೈದ್ಯ ಶ್ರೀ ಶ್ರೀಧರ್ ಸ್ಕೌಟ್ಸ್-ಗೈಡ್ಸ್‌ನ ಉಪಯೋಗ ನಾಯಕತ್ವದ ಗುಣಗಳು ತರಬೇತಿ ನಿಯಮಗಳನ್ನು ತಿಳಿಸಿದರು.

ಈ ಸಂದರ್ಭದಲ್ಲಿ ಹಿರಿಯರಾದ ಶ್ರೀಮತಿ ರೇಣುಕಮ್ಮ ಮತ್ತು ಶ್ರೀ ಹಾಲಪ್ಪನವರನ್ನು ಸನ್ಮಾನಿಸಲಾಯಿತು. ಸಮಾರಂಭದಲ್ಲಿ ಕಲ್ಪತರು ವಿದ್ಯಾ ಸಂಸ್ಥೆ ಖಜಾಂಚಿ ಶ್ರೀ ಟಿ.ಎಸ್. ಶಿವಪ್ರಸಾದ್, ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಘಟನಾಧಿಕಾರಿ ಶ್ರೀ ರವೀಶ್, ಛೇರ್ಮನ್ ಶ್ರೀ ಸದಾಶಿವ ರಾವ್, ಶ್ರೀ ಕೆ.ಎಸ್. ಬಸವರಾಜು, ಖಜಾಂಚಿ ಶ್ರೀ ಪಿ. ಹಾಲಾನಾಯ್ಕ, ಕಿರುತೆರೆ ನಟ ಶ್ರೀ ದಯಾನಂದ ಸಾಗರ್ ಮತ್ತಿತರರಿದ್ದರು.

* ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ತಿಪಟೂರು ತಾಲ್ಲೂಕು ಹಾಗು ನಗರ ಸಭೆ ತಿಪಟೂರು ವತಿಯಿಂದ ದಿನಾಂಕ 07-02-2016 ರಂದು ತಿಪಟೂರು ನಗರದ ಬಸ್ ನಿಲ್ದಾಣದ ಮುಂಭಾಗ, ಪಾರ್ಕ್, ಕೆರೆಯ ಅಂಗಳ ಇವುಗಳು ಆಯ್ಕೆ ಮಾಡಿ ಸ್ಕೌಟ್, ಗೈಡ್ ತಂಡಗಳಲ್ಲಿ ಸ್ವಚ್ಛತೆ ಮಾಡಲಾಯಿತು. ಸ್ವಚ್ಛತೆಗೆ ಸಂಬಂಧಿಸಿದ ಘೋಷಣೆ ಹಾಗೂ ಪ್ಲೇ ಕಾರ್ಡ್ ಗಳೊಂದಿಗೆ ನಗರದ ಪ್ರಮುಖ ರಸ್ತೆಗಳಲ್ಲಿ ಜಾಥಾ ನಡೆಸಿ ಸಾರ್ವಜನಿಕರಲ್ಲಿ ಅರಿವು ಉಂಟುಮಾಡಲಾಯಿತು. ಈ ಜಾಥಾದಲ್ಲಿ ಅಧ್ಯಕ್ಷರದ ಶ್ರೀ ನಂದಕುಮಾರ್, ಸ.ಸಾ.ಸಂ. ಉಪಾಧ್ಯಕ್ಷೆ ಯಾದ ಶ್ರೀಮತಿ ರೇಣುಕಮ್ಮ, ಕಿರುತೆರೆ ನಟರಾದ ಶ್ರೀ ದಯಾನಂದ ಸಾಗರ್, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಟಿ. ಸಿಂದಗೀಕರ್, ಎ.ಡಿ.ಸಿ., ಗಳಾದ ಶ್ರೀ ಚಂದ್ರಶೇಖರ್, ಶ್ರೀಮತಿ ವನಿತಾ, ಡಿ.ಓ.ಸಿ.ಗಳಾದ ಎಸ್.ವಿ. ಲಕ್ಷ್ಮಿ ರವೀಶ್ ಹಾಗು ಸ್ಥಳೀಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಹಾಜರಿದ್ದರು. ಸುಮಾರು 500 ಸ್ಕೌಟ್ಸ್-ಗೈಡ್ಸ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ನಗರ ಸಭೆ ಸದಸ್ಯರಾದ ಶ್ರೀ ಸುಧಾಕರ್ ರವರು ಹಾಜರಿದ್ದು ಎಲ್ಲಾ ಶಿಬಿರಾರ್ಥಿಗಳಿಗೆ ಹ್ಯಾಂಡ್ ಗ್ಲೌಸ್ ಹಾಗೂ ಮಾಸ್ಕ್‌ನ್ನು ನೀಡಿದರು.

* ದಿನಾಂಕ 08-02-2016 ರಂದು ಸ್ಥಳೀಯ ಸಂಸ್ಥೆ ತಿಪಟೂರು ತಾಲ್ಲೂಕು ತುಮಕೂರು ಜಿಲ್ಲಾ ವತಿಯಿಂದ ತಾಲೂಕು ಮಟ್ಟದ ರ್‍ಯಾಲಿ ಹಮ್ಮಿಕೊಳ್ಳಲಾಯಿತು. ಈ ರ್‍ಯಾಲಿಯ ಮಾರ್ಗದರ್ಶಕರಾಗಿ ಶ್ರೀ ಗಂಗಾಧರ್ ಎಲ್.ಟಿ. (ಸ್ಕೌಟ್) ಕಾರ್ಯ ನಿರ್ವಹಿಸಿದರು. ಈ ರ್‍ಯಾಲಿಯಲ್ಲಿ 500 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

ತಿಪಟೂರಿನ ಪ್ರಮುಖ ರಸ್ತೆಗಳಲ್ಲಿ ಜಾಥಾ ಹಮ್ಮಿಕೊಳ್ಳಲಾಗಿತ್ತು. ಪೊಲೀಸ್ ಇಲಾಖೆಯವರು ಸಹಕರಿಸಿ ರಸ್ತೆ ಸಂಚಾರಕ್ಕೆ ಸುಗಮವಾಗಲು ಅನುಕೂಲ ಮಾಡಿಕೊಟ್ಟರು. ಈ ಜಾಥಾದಲ್ಲಿ ಜಿಲ್ಲೆಯ ಕಾರ್ಯದರ್ಶಿಗಳಾದ ಶ್ರೀ ಸುರೇಂದ್ರ ಷಾ, ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ನಂದಕುಮಾರ್, ಛೇರ್‌ಮನ್ ಶ್ರೀ ಸದಾಶಿವರಾವ್, ಕಾರ್ಯದರ್ಶಿ ಶ್ರೀ ನಂಜುಂಡಸ್ವಾಮಿ, ಶ್ರೀ ಬಸವರಾಜಯ್ಯ, ಸಿ.ಎನ್. ಹಳ್ಳಿ ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಹಾಗೂ ತಾಲ್ಲೂಕಿನ ಸ್ಕೌಟರ್, ಗೈಡರ್, ಫ್ಲಾಕ್ ಲೀಡರ್, ಕಬ್ ಮಾಸ್ಟರ್ ಇವರುಗಳು, ಜಿಲ್ಲಾ ಸಂಸ್ಥೆಯ ಡಿ.ಓ.ಸಿ., ಗಳಾದ ರವೀಶ್, ಶ್ರೀಮತಿ ಎಸ್.ವಿ. ಲಕ್ಷ್ಮಿ ಹಾಜರಿದ್ದರು.

* ದಿನಾಂಕ 21-02-2016 ರ ಭಾನುವಾರದಂದು ತುಮಕೂರು ಜಿಲ್ಲಾ ವ್ಯಾಪ್ತಿಯಲ್ಲಿ ಪಲ್ಸ್ ಪೋಲಿಯೋ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಬೆಳಗ್ಗೆ ಜಿಲ್ಲಾ ಆಸ್ಪತ್ರೆ ಆವರಣದಲ್ಲಿ ಜಿಲ್ಲಾ ವೈದ್ಯಾಧಿಕಾರಿಗಳು ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು, 200 ಸ್ಕೌಟ್ಸ್-ಗೈಡ್ಸ್‌ಗಳು ಹಾಗೂ ಶಿಕ್ಷಕರು ಹಾಜರಿದ್ದರು. ನಂತರ ತುಮಕೂರು ನಗರ ವ್ಯಾಪ್ತಿಯ ಪ್ರತಿ ಬೂತ್‌ಗಳಲ್ಲಿಯೂ 20 + 20 ರಂತೆ (ಸ್ಕೌಟ್ಸ್-ಗೈಡ್ಸ್‌ಗಳನ್ನು) ಹಂಚಿಕೆ ಮಾಡಲಾಯಿತು. ರೈಲ್ವೆ ನಿಲ್ದಾಣದಲ್ಲಿ, ಬಸ್ ನಿಲ್ದಾಣದಲ್ಲಿ, ಖಾಸಗಿ ಬಸ್ ನಿಲ್ದಾಣ, ಟೋಲ್ ಗೇಟ್‌ಗಳಲ್ಲಿ, ಅಂಗನವಾಡಿ ಕಟ್ಟಡಗಳಿಗೆ ಸ್ಕೌಟ್-ಗೈಡ್‌ಗಳನ್ನು ನಿಯೋಜಿಸಲಾಗಿತ್ತು.

ರೋಟರಿ ಸಂಸ್ಥೆಯವರು ಭಾಗವಹಿಸಿದ ಎಲ್ಲಾ ಮಕ್ಕಳಿಗೂ ಶಿಕ್ಷಕರಿಗೂ ಉಪಹಾರ ಹಾಗೂ ಊಟದ ವ್ಯವಸ್ಥೆ ಮಾಡಿದ್ದರು.

* ದಿನಾಂಕ 20-02-2016 ರಿಂದ 21-02-2016 ರವರೆಗೆ 2 ದಿನಗಳ ಕಾಲ ಸ್ಥಳೀಯ ಸಂಸ್ಥೆ ತಿಪಟೂರು ತಾಲ್ಲೂಕು ತುಮಕೂರು ಜಿಲ್ಲೆಯ ವತಿಯಿಂದ ಹೈಕಿಂಗ್ ಮತ್ತು ರಾತ್ರಿ ಶಿಬಿರವಾಸ ಹಮ್ಮಿಕೊಳ್ಳಲಾಯಿತು. ರಾಜ್ಯ ಪುರಸ್ಕಾರಕ್ಕೆ ಅರ್ಜಿ ಸಲ್ಲಿಸಿರುವ 143 ಸ್ಕೌಟ್-ಗೈಡ್‌ಗಳು, 25 ಸ್ಕೌಟ್ ಮಾಸ್ಟರ್ಸ್, ಗೈಡ್ ಕ್ಯಾಪ್ಟನ್‌ಗಳು ಸ್ಥಳೀಯ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಈ ಕಾರ್ಯಕ್ರಮದಲ್ಲಿ ಹಾಜರಿದ್ದರು.

ಸ್ಥಳೀಯ ಸಂಸ್ಥೆಯ ಛೇರ್‌ಮನ್‌ರಾದಂತಹ ಶ್ರೀ ಸದಾಶಿವರಾವ್ ರವರು ಶಿಬಿರದಲ್ಲಿ ಭಾಗವಹಿಸಿದ್ದ ಎಲ್ಲರಿಗೂ ಸಿಹಿ ವಿತರಣೆ ಮಾಡಿದರು. ಅಧ್ಯಕ್ಷರಾದ ಶ್ರೀ ನಂದಕುಮಾರ್ ರವರು ಎಲ್ಲರಿಗೂ ಊಟದ ವ್ಯವಸ್ಥೆ ಮಾಡಿದ್ದರು. ಕಾರ್ಯಕ್ರಮದ ಉಸ್ತುವಾರಿಯನ್ನು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ನಂಜುಂಡಸ್ವಾಮಿ, ಖಜಾಂಚಿಯವರಾದ ಶ್ರೀ ಬಸವರಾಜುರವರು ವಹಿಸಿದ್ದರು. ರೇವಣ ಸಿದ್ದೇಶ್ವರ ಬೆಟ್ಟಕ್ಕೆ ಕಾಲ್ನಡಿಗೆಯ ಜಾಥಾ ಹಮ್ಮಿಕೊಳ್ಳಲಾಯಿತು. ರಾತ್ರಿ ಶಿಬಿರಾಗ್ನಿ ಮುಗಿಸಿ ಸಮುದಾಯ ಭವನದಲ್ಲಿ ತಂಗಿದ್ದರು. ಬೆಳಗ್ಗೆ ವಿವಿಧ ಚಟುವಟಿಕೆಗಳನ್ನು ನಡಸಲಾಯಿತು.

* ದಿನಾಂಕ 24-02-2016 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ತುಮಕೂರು ವತಿಯಿಂದ ಕಬ್ಸ್-ಬುಲ್‌ಬುಲ್ಸ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಜಿಲ್ಲಾ ರ‍್ಯಾಲಿಯನ್ನು ತುಮಕೂರಿನ ಸರ್ಕಾರಿ ಜೂನಿಯರ್ ಕಾಲೇಜು ಮೈದಾನ ಬಿ.ಹೆಚ್. ರಸ್ತೆ ಇಲ್ಲಿ ಏರ್ಪಡಿಸಲಾಗಿತ್ತು. ಈ ರ‍್ಯಾಲಿಯಲ್ಲಿ ತುಮಕೂರು ಜಿಲ್ಲೆಯ 6 ತಾಲ್ಲೂಕುಗಳಿಂದ 1147 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಭಾಗವಹಿಸಿದ್ದರು.

ಬೆಳಿಗ್ಗೆ 10 ಗಂಟೆಗೆ ಉದ್ಘಾಟನಾ ಕಾರ್ಯಕ್ರಮ ಪ್ರಾರಂಭವಾಯಿತು. ಮುಖ್ಯ ಆಯುಕ್ತರಾದ ಶ್ರೀಮತಿ ಆಶಾ ಪ್ರಸನ್ನಕುಮಾರ್ ರವರು ರ‍್ಯಾಲಿಯನ್ನು ಉದ್ಘಾಸಿದರು. ಅತಿಥಿಗಳಾಗಿ ಶ್ರೀ ಕರುಣಾಕರ್ ಆರಾಧ್ಯ, ಸದಸ್ಯರು, ಮ.ನ.ಪಾ. ತುಮಕೂರು ಇವರು ಭಾಗವಹಿಸಿದದರು. ಈ ಸಂದರ್ಭದಲ್ಲಿ ಶ್ರೀ ವೇಣುಗೋಪಾಲಕೃಷ್ಣ, ಡಿ.ಸಿ.(ಎಸ್) ಶ್ರೀಮತಿ ಸುಭಾಷಿಣಿ ರವೀಶ್ ಡಿ.ಸಿ.(ಜಿ), ಕಾರ್ಯದರ್ಶಿಗಳಾದ ಶ್ರೀ ಸುರೇಂದ್ರ ಎ.ಷಾ, ಹಾಗು ಇತರೆ ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದದರು. ಜಿಲ್ಲಾ ಕಾರ್ಯದರ್ಶಿಗಳು ಎಲ್ಲರನ್ನು ಸ್ವಾಗತಿಸಿದರು. ಎ.ಡಿ.ಸಿ. ಶ್ರೀ ಬೆಳ್ಳಿ ಲೋಕೇಶ್ ರವರು ಎಲ್ಲರಿಗೂ ವಂದಿಸಿದರು.

ಸಾಹಸಮಯ ಚಟುವಟಿಕೆಗಳು, ಚಿತ್ರಕಲೆ, ಮಣ್ಣಿನ ಮಾದರಿ ತಯಾರಿಕೆ, ವಿಜ್ಞಾನ ಮಾದರಿ ತಯಾರಿಕೆ, ಗಾಳಿಪಟ ಸ್ಪರ್ಧೆ, ಸಂಗೀತ, ನೃತ್ಯ, ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗಿತ್ತು.

Be more dedicated to making solid achievements than in running after swift but synthetic happiness.

**- A.P.J. Abdul Kalam**

## ಉಡುಪಿ

ಇಡೀ ಪ್ರಪಂಚಕ್ಕೆ ಸರ್ವಶಕ್ತನಾದ ದೇವರು ಒಬ್ಬರು, ವಿವಿಧ ಧರ್ಮದವರು ಹಲವು ಹೆಸರಿನಲ್ಲಿ ಹಲವು ರೂಪದಲ್ಲಿ ದೇವರನ್ನು ಆರಾಧಿಸುತ್ತಾರೆ ಎಂದು ಉಡುಪಿ ಪುತ್ತಿಗೆ ಮಠದ ಶ್ರೀಶ್ರೀ ಸುಗುಣೇಂದ್ರ ತೀರ್ಥ ಶ್ರೀಪಾದರು ನುಡಿದರು.

ದಿನಾಂಕ 22-02-2016 ರಂದು ಸ್ಕೌಟ್ಸ್-ಗೈಡ್ಸ್ ಸ್ಥಾಪಕರ ದಿನಾಚರಣೆ ಅಂಗವಾಗಿ ಉಡುಪಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಜಿಲ್ಲಾ ಸಂಸ್ಥೆ. ಹಾಗೂ ಡಾ। ಜಿ. ಶಂಕರ್ ಮಹಿಳಾ ಸರಕಾರಿ ಪ್ರಥಮ ದರ್ಜೆ ಕಾಲೇಜು ಹಾಗೂ ಸ್ನಾತಕೋತ್ತರ ಕೇಂದ್ರ, ಅಜ್ಜರಕಾಡು ಇವರ ಸಹಯೋಗದಲ್ಲಿ ಭುಜಂಗ ಪಾರ್ಕ್‌ನಲ್ಲಿ ಸರ್ವಧರ್ಮ ಪ್ರಾರ್ಥನೆ ಕಾರ್ಯಕ್ರಮದಲ್ಲಿ ಶ್ರೀಗಳು ಆಶೀರ್ವಚನ ನೀಡುತ್ತಿದ್ದರು. ಪರರ ಧರ್ಮಗಳಲ್ಲಿ ನಂಬಿಕೆ ಗೌರವ ಹಾಗೂ ಪರಸ್ಪರ ಸಹಿಷ್ಣುತೆ ಇಂದಿನ ಕಾಲಕ್ಕೆ ಅಗತ್ಯವೆಂದು ನೂರಾನಿ ಮಸೀದಿ ಇಂದ್ರಾಳಿ ಮೌಲಾನರಾದ ಮಸೀಉಲ್ಲಾ ಖಾನ್ ನುಡಿದರು. ತನ್ನ ಧರ್ಮವನ್ನು ಸರಿಯಾಗಿ ಅರಿತವನು ಮಾತ್ರ ಇತರರ ಧರ್ಮವನ್ನು ಗೌರವಿಸುತ್ತಾರೆ ಎಂದು ರೆ. ಪಾ. ವಿಲಿಯಮ್ ಮಾರ್ಟಿಸ್ ತಿಳಿಸಿದರು.

ಡಾ। ಜಿ. ಶಂಕರ್ ಮಹಿಳಾ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ಜಗದೀಶ್ ರಾವ್ ಕಾಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಜಿಲ್ಲಾಕಾರ್ಯದರ್ಶಿ ಶ್ರೀ ಶೇಖರ್ ಪೂಜಾರಿ ಸ್ವಾಗತಿಸಿದರು. ಡಾ. ಜಿ. ಶಂಕರ್ ಮಹಿಳಾ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೇಂಜರ್ ಲೀಡರ್‌ರಾದ ಶ್ರೀಮತಿ ಟಿಜಾ ಥೋಮಸ್ ರವರು ಕಾರ್ಯಕ್ರಮ ನಿರೂಪಿಸಿದರು. ಡಾ. ಜಯರಾಮ್ ಶೆಟ್ಟಿಗಾರ್ ಧನ್ಯವಾದ ನೀಡಿದರು.

* ಉರುಪಿ ಜಿಲ್ಲಾ ಸಂಸ್ಥೆ ಹಾಗೂ ಹಿಂದೂ ಹಿರಿಯ ಪ್ರಾಥಮಿಕ ಶಾಲೆ, ಉದ್ಯಾವರ ಇವರ ಸಂಯುಕ್ತಾಶ್ರಯದಲ್ಲಿ ಜಿಲ್ಲಾ ಮಟ್ಟದ ಕಬ್-ಬುಲ್‌ಬುಲ್ ಉತ್ಸವವನ್ನು ದಿನಾಂಕ 27-02-2016 ಮತ್ತು 28-02-2016 ರಂದು ಹಿಂದೂ ಹಿರಿಯ ಪ್ರಾಥಮಿಕ ಶಾಲೆ ಇಲ್ಲಿ ನಡೆಸಲಾಯಿತು. ಉದ್ಘಾಟನಾ ಸಮಾರಂಭದ ಅಧ್ಯಕ್ಷರಾಗಿ ಶ್ರೀ ಕೆ.ಬಿ. ರಾವ್ ಉಪಸ್ಥಿತರಿದ್ದರು. ಅತಿಥಿಗಳಾಗಿ ಶ್ರೀ ಜಿತೇಂದ್ರ ಕುಮಾರ್ ಸಮಾಜ ಸೇವಕರು, ಉದ್ಯಾವರ, ಇವರು ಮಾತನಾಡಿ ಚಿಕ್ಕ ಮಕ್ಕಳು ಈ ಕಾಲದಲ್ಲಿ ತಮ್ಮ ಪೋಷಕರನ್ನು ಬಿಟ್ಟು ಸ್ವಾವಲಂಬಿಯಾಗಿ ಬದುಕಲು ಇಂತಹ ಶಿಬಿರಗಳು ಸಹಕಾರಿಯಾಗುತ್ತದೆ ಎಂದರು. ಇಂತಹ ಕಾರ್ಯಕ್ರಮವನ್ನು ಸಂಘಟಿಸುವ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯನ್ನು ಪ್ರಶಂಸಿದರು.

ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎಡ್ವಿನ್ ಆಳ್ವ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ರಾಜಲಕ್ಷ್ಮಿ ಡಿ. ಶೆಟ್ಟಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಕಲ್ಮಾಡಿ ಶೇಖರ್ ಪೂಜಾರಿ, ಸ್ಥಾನೀಯ ಆಯುಕ್ತರುಗಳಾದ ಶ್ರೀ ದಯಾನಂದ ಶೆಟ್ಟಿ ಶ್ರೀ ಆನಂದ ಅಡಿಗ ಭಾಗವಹಿಸಿದ್ದರು. ಶಾಲಾ ಮುಖ್ಯೋಪಾಧ್ಯಾಯರಾದ ಶ್ರೀ ಗಣಪತಿ ಕಾರಂತ್ ಎಲ್ಲರನ್ನು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿಗಳು ಧನ್ಯವಾದ ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಶಿಬಿರ ನಾಯಕರಾದ ಶ್ರೀಮತಿ ರತ್ನಾವತಿ ಅವರು ಕಾರ್ಯಕ್ರಮದ ಪಕ್ಷಿನೋಟ ನೀಡಿದರು. ಶ್ರೀ ಬಿ. ಆನಂದ ಅಡಿಗ ಅವರು ಕಾರ್ಯಕ್ರಮದ ನಿರ್ವಹಣೆಯನ್ನು ಮಾಡಿದರು.

ನಗರ ಮೆರವಣಿಗೆ, ಸಾಹಸಮಯ ಆಟಗಳನ್ನು, ಬೆಂಕಿ ಬಳಸದೆ ತಿಂಡಿ ತಯಾರಿ, ಸರ್ವಧರ್ಮ ಪ್ರಾರ್ಥನೆ, ಜಾನಪದ ನೃತ್ಯ, ಕಸದಿಂದ ರಸ, ಸರಳ ವ್ಯಾಯಾಮ, ಶಿಬಿರಾಗ್ನಿ ಮುಂತಾದ ಕಾರ್ಯಕ್ರಮಗಳನ್ನು ನಡೆಸಲಾಯಿತು. ಜಿಲ್ಲೆಯಿಂದ ಸುಮಾರು 200 ಕಬ್-ಬುಲ್ ಬುಲ್ ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಭಾಗವಹಿಸಿದ್ದರು ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮಿನ್ ಹಾಗು ಶ್ರೀಮತಿ ಸುಮನ್ ಶೇಖರ್ ಇವರುಗಳು ಇವರೆಲ್ಲರ ಸಹಕಾರದಿಂದ ಕಾರ್ಯಕ್ರಮವನ್ನು ಸಂಘಟಿಸಿರು.

# ಚಾಮರಾಜನಗರ ಜಿಲ್ಲೆಯ ಯಳಂದೂರಿನ ಎಸ್.ಡಿ.ವಿ.ಎಸ್. ಶಾಲೆಯ ವಿದ್ಯಾರ್ಥಿ/ ವಿದ್ಯಾರ್ಥಿನಿಯರ ಅನಿಸಿಕೆಗಳು

ಶ್ರೀ ಪಿ.ಜಿ.ಆರ್. ಸಿಂಧ್ಯರವರು ಒಬ್ಬ ಪ್ರಾಮಾಣಿಕ ರಾಜಕಾರಿಣಿ ಇವರು ಬಹಳ ಸರಳ ವ್ಯಕ್ತಿ. ಇವರು ಮಾಜಿ ಗೃಹಸಚಿವರಾಗಿ ಸೇವೆ ಸಲ್ಲಿಸಿದ್ದಲ್ಲದೇ, ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕದ ರಾಜ್ಯ ಮುಖ್ಯ ಆಯುಕ್ತರಾಗಿದ್ದಾರೆ. ಇವರು ನಮ್ಮ ವಿದ್ಯಾ ಸಂಸ್ಥೆಯ 15ನೇ ವಾರ್ಷಿಕೋತ್ಸವಕ್ಕೆ ಆಗಮಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಇದರಿಂದ ನಮ್ಮೆಲ್ಲರಿಗೂ ಬಹಳ ಸಂತೋಷವಾಯಿತು. ಶ್ರೀ ಪಿ.ಜಿ.ಆರ್. ಸಿಂಧ್ಯರವರಂತೆ ಇನ್ನು ಹೆಚ್ಚು ಪ್ರಾಮಾಣಿಕ ರಾಜಕಾರಣಿಯನ್ನು ನಾನು ನಮ್ಮ ಸಮಾಜದಲ್ಲಿ ಬಯಸುತ್ತೇನೆ. ವಾರ್ಷಿಕೋತ್ಸವಕ್ಕೆ ಆಗಮಿಸಿದ್ದ ಸಂದರ್ಭದಲ್ಲಿ ಮಕ್ಕಳನ್ನು ಓದುವಂತೆ, ಒಳ್ಳೆಯ ಸಾಧನೆ ಮಾಡುವಂತೆ ಪ್ರೇರೆಪಿಸಿದರು.

**ರೇಶ್ಮಾ. ಪಿ.,** 9ನೇ ತರಗತಿ

ಶ್ರೀ ಪಿ.ಜಿ.ಆರ್. ಸಿಂಧ್ಯರವರು ಮಾಜಿ ಗೃಹ ಸಚಿವರು ಹಾಗೂ ರಾಜ್ಯ ಮುಖ್ಯ ಆಯುಕ್ತರು ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಅವರು ನಾ ಕಂಡಂತಹ ಪ್ರಾಮಾಣಿಕ ವ್ಯಕ್ತಿಗಳಲ್ಲೊಬ್ಬರು. ಅವರು ಎಷ್ಟೇ ಪುರಸ್ಕಾರಗಳನ್ನು ಪಡೆದರು ಸಹ ಒಬ್ಬ ಸಾಮಾನ್ಯ ವ್ಯಕ್ತಿಯಂತೆ ನಡೆದುಕೊಳ್ಳುತ್ತಾರೆ ಮತ್ತು ಸಮಯ ಪ್ರಜ್ಞೆಯುಳ್ಳ ಒಬ್ಬ ವ್ಯಕ್ತಿ.

ಶ್ರೀ ಪಿ.ಜಿ.ಆರ್. ಸಿಂಧ್ಯರವರು ದಿನಾಂಕ 25–01–2016ರಂದು ನಮ್ಮ ಶಾಲೆಯಲ್ಲಿ ಆಯೋಜಿಸಿದ್ದ 15ನೇ ವರ್ಷದ ಶಾಲಾ ವಾರ್ಷಿಕೋತ್ಸವ ಸಮಾರಂಭಕ್ಕೆ ಆಗಮಿಸಿ ಅವರ ಬಾಲ್ಯದ ಜೀವನ ಹಾಗೂ ಕಷ್ಟಗಳನ್ನು ನಮ್ಮ ಜೊತೆ ಹಂಚಿಕೊಂಡರು. ಕಾರ್ಯಕ್ರಮಕ್ಕೆ ಆಗಮಿಸುವಾಗ ಅವರು ಬರಿಗಾಲಿನಲ್ಲೇ ಆಗಮಿಸಿದ್ದರು. ಇದು ಅವರ ಸರಳತೆಯನ್ನು ತಿಳಿಸುತ್ತದೆ. ಅವರು ಎಷ್ಟೇ ಎತ್ತರದ ಪದವಿಗೆ ಏರಿದರು ಸಹ ಅವರು ಒಬ್ಬ ಸಾಮಾನ್ಯ ವ್ಯಕ್ತಿಯಂತಿರುತ್ತಿದ್ದರು. ಅವರ ಸರಳತೆ, ಒಳ್ಳೆಯ ಮನೋಭಾವದಿಂದ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸದಸ್ಯರಿಗೆ ಉಚಿತವಾಗಿ ಕರ್ನಾಟಕ ದರ್ಶನವನ್ನು ಆಯೋಜಿಸಿದ್ದರು. ಕರ್ನಾಟಕ ದರ್ಶದಲ್ಲಿ ವಿದ್ಯಾರ್ಥಿಗಳು ಭಾಗವಹಿಸಿ ಉಪಯೋಗ ಪಡೆದರು. ಇದರಲ್ಲಿ ನಮ್ಮ ವಿದ್ಯಾರ್ಥಿಗಳು ಸಹ ಭಾಗವಹಿಸಿದ್ದರು.

**ಮೋಹನ್. ವೈ.ಪಿ,** 9ನೇ ತರಗತಿ

ಶ್ರೀ. ಪಿ.ಜಿ.ಆರ್. ಸಿಂಧ್ಯರವರು, ಮಾಜಿ ಗೃಹ ಸಚಿವರು ಹಾಗೂ ರಾಜ್ಯ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ಇವರು ಕಂಡಂತಹ ಪ್ರಾಮಾಣಿಕ ವ್ಯಕ್ತಿಗಳಲ್ಲೊಬ್ಬರು. ಇವರ ಸಾಧನೆಗೆ ಕಾರಣವಾಗಿರುವುದು ಅವರ ಸರಳತೆ, ಸೌಮ್ಯತೆ. ಅವರಿಂದ ಕಲಿಯುವಂತಹ ವಿಷಯಗಳು ತುಂಬಾ ಇದೆ. ಅದರಲ್ಲಿ ಮುಖ್ಯವಾಗಿರುವುದು ನಮ್ಮ ಕೆಲಸಗಳನ್ನು ನಾವೇ ಮಾಡಿಕೊಳ್ಳುವುದು.

**ರಕ್ಷಿತಾ. ಎನ್,** 9ನೇ ತರಗತಿ

ಶ್ರೀ. ಪಿ.ಜಿ.ಆರ್. ಸಿಂಧ್ಯರವರು, ಮಾಜಿ ಗೃಹ ಸಚಿವರು ಹಾಗೂ ರಾಜ್ಯ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ ಮತ್ತು ಗೈಡ್ಸ್, ಕರ್ನಾಟಕ. ಅವರು ನಾಡು ಕಂಡಂತಹ ಸಮಯ ಪ್ರಜ್ಞೆಯುಳ್ಳ ಒಬ್ಬ ವ್ಯಕ್ತಿ. ಶ್ರೀ. ಪಿ.ಜಿ.ಆರ್. ಸಿಂಧ್ಯರವರು ದಿನಾಂಕ 25/01/2016ರಂದು ನಮ್ಮ ಶಾಲೆಯಲ್ಲಿ ಆಯೋಜಿಸಿದ್ದ 15ನೇ ವಾರ್ಷದ ಶಾಲಾ ವಾರ್ಷಿಕೋತ್ಸವ ಸಮಾರಂಭಕ್ಕೆ ಆಗಮಿಸಿ ಅವರ ಬಾಲ್ಯದ ಜೀವನ ಹಾಗೂ

ಕಷ್ಟಗಳನ್ನು ನಮ್ಮ ಜೊತೆ ಹಂಚಿಕೊಂಡರು. ಸ್ಕೌಟ್ಸ್ ಮತ್ತು ಗೈಡ್ಸ್‌ನ ಸದಸ್ಯರನ್ನು ಒಬ್ಬೊಬ್ಬರಾಗಿ ಮಾತನಾಡಿಸಿದರು. ಇದರಿಂದ ಅವರ ಸಮಯಪಾಲನೆ ಹಾಗೂ ತಾಳ್ಮೆ ತಿಳಿಯುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ಶ್ರೀ. ಪಿ.ಜಿ.ಆರ್. ಸಿಂಧ್ಯರವರ ಪ್ರಾಮಾಣಿಕತೆ, ಸ್ವಚ್ಛತೆ, ಸರಳತೆ, ಒಳ್ಳೆಯ ಮನೋಭಾವ, ತಾಳ್ಮೆ, ಸಮಯಪಾಲನೆ ಇವೆಲ್ಲವೂ ಮೆಚ್ಚುವಂಥವು.

**ಮನೋಜ್ .ವಿ,** 9ನೇ ತರಗತಿ

ದಿನಾಂಕ 25-01-2016 ರಂದು ನಮ್ಮ ಶಾಲಾ ವಾರ್ಷಿಕೋತ್ಸವಕ್ಕೆ ಉದ್ಘಾಟಕರಾಗಿ ಆಗಮಿಸಿದ್ದ, ಹಲವಾರು ಖಾತೆಗಳ ಮಂತ್ರಿಗಳಾಗಿದ್ದ ಸಿಂಧ್ಯರವರ ಬಗ್ಗೆ ತನ್ನ ಮನದಾಳದ ಮಾತನ್ನು ಹೇಳಲು ಇಚ್ಛಿಸುತ್ತೇನೆ. ಸಿಂಧ್ಯರವರು ಹಿಂದೆ ವಿರೋದಪಕ್ಷದ ಉಪನಾಯಕರಾಗಿ, ಮಾನವ ಕಲ್ಯಾಣ ಖಾತೆಯಲ್ಲಿ ಮತ್ತು ಶಿಕ್ಷಣ ಖಾತೆಯಲ್ಲಿ ಮಂತ್ರಿಯಾಗಿ ಮತ್ತು ಮಾಜಿ ಗೃಹ ಸಚಿವರು ಆಗಿ ರಾಜ್ಯ ಸರ್ಕಾರಕ್ಕೆ ತಮ್ಮ ದಕ್ಷ ಹಾಗೂ ಪ್ರಾಮಾಣಿಕ ಕೊಡುಗೆಯನ್ನು ನೀಡಿದ್ದಾರೆ. ಪ್ರಸ್ತುತ ಸಿಂಧ್ಯರವರು ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್‌ನ ಮುಖ್ಯ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ನಾನು ಅವರ ಬಗ್ಗೆ ಇಷ್ಟೆಲ್ಲ ತಿಳಿದಿದ್ದು ನಮ್ಮ ಶಾಲಾ ವಾರ್ಷಿಕೋತ್ಸವ ಸಮಾರಂಭದಲ್ಲಿ, ನಮ್ಮ ಶಾಲೆಯಲ್ಲಿ ಅವರು ಮಾತಿನಲ್ಲಿದ್ದ ಸರಳತೆ, ಸಂಯಮತೆ ನನ್ನನ್ನು ಬಹಳವಾಗಿ ಆಕರ್ಷಿಸಿತು. ಅವರು ಚಪ್ಪಲಿಯನ್ನು ಕಂಡಿದ್ದು ಕಾಲೇಜಿನ ಮೆಟ್ಟಿಲನ್ನು ಹತ್ತಿದಾಗಲೇ. ಅವರು ಇಂಜಿನಿಯರಿಂಗ್ ಪದವಿಯನ್ನು ಪಡೆದಾಗ ಶೂ ಕಡ್ಡಾಯ ಎಂದು ಅದನ್ನು ತೆಗೆದುಕೊಂಡರಂತೆ. ಇವೆಲ್ಲವನ್ನು ನಾನು ಅವರಿಂದಲೇ ತಿಳಿದುಕೊಂಡೆ. ಒಬ್ಬ ಮಹಾನ್ ವ್ಯಕ್ತಿ ಒಂದು ಕಡೆ ಹೇಳುತ್ತಾರೆ. "ನಾವು ಉನ್ನತ ಸ್ಥಾನಕ್ಕೆ ಏರಿದ ನಂತರವು ನಾವು ನಡೆದು ಬಂದ ಸುಖ-ದು:ಖಗಳ ಹಾದಿಯನ್ನು ನೆನೆಸಿಕೊಂಡಾಗ ಮಾತ್ರ ನಮ್ಮ ಸ್ಥಾನಕ್ಕೆ ಮತ್ತು ನಮ್ಮ ಜೀವನಕ್ಕೆ ಸಾರ್ಥಕತೆ ಇರುತ್ತದೆ" ಎಂಬಂತೆ ಸಿಂಧ್ಯರವರು ಮಾತನಾಡಿದ್ದರು.

ಯುವ ಸಂಸತ್‌ನಲ್ಲಿ ಭಾಗವಹಿಸಿದ್ದಕ್ಕೆ ಬಂದ ನಗದು ಬಹುಮಾನವನ್ನು ಶ್ರೀ. ಪಿ.ಜಿ.ಆರ್. ಸಿಂಧ್ಯರಿಂದ ಪಡೆದುಕೊಂಡೆ. ನನಗೆ ಬಹಳ ಖುಷಿಯಾಯಿತು. ನಾನು ಅವರಂತೆ ಸರಳತೆಯನ್ನು ಮೈಗೂಡಿಸಿಕೊಳ್ಳಲ್ಲು ಪ್ರಯತ್ನಿಸುತ್ತೇನೆ ಮತ್ತು ಅವರಂತೆ ಯಾವ ಕೆಲಸವನ್ನು ಮಾಡಿದರು ಪ್ರಾಮಾಣಿಕಾಗಿ ಮಾಡುತ್ತೇನೆಂದು ಅಂದುಕೊಂಡಿದ್ದೇನೆ.

ಅವರು ಮೈಸೂರಿನಲ್ಲಿ ಅಂತರಾಷ್ಟ್ರೀಯ ಜಾಂಬೂರೇಟ್ ನಡೆಸಲು ಮುಂದಾಗಿದ್ದಾರೆ. ಅವರ ಈ ಮಹಾಕೆಲಸವು ಯಾವುದೇ ನಿರ್ವಘ್ನವಿಲ್ಲದೆ ಎಂದು ನಡೆಯಲ್ಲಿ ಎಂದು ದೇವರಲ್ಲಿ ಪ್ರಾರ್ಥಿಸುತ್ತೇನೆ. ಸಿಂಧ್ಯರವರು ಒಂದೊಂದು ಅನ್ನದ ಅಗುಳಿಗು ಮಹತ್ವವನ್ನು ಕೊಡುತ್ತಾರೆ ಮತ್ತು ತಮಗೆ ಬೇಕಾದಷ್ಟನ್ನು ಮಾತ್ರ ಬಡಿಸಿಕೊಂಡು ಊಟವನ್ನು ವ್ಯಯಿಸುವುದಿಲ್ಲ ಎಂದು ತಿಳಿದೆ. ಸಿಂಧ್ಯರವರು ಒಂದೊಂದು ಅಗುಳಿನ ಹಿಂದೆಯು ಒಬ್ಬ ರೈತನ ಬೆವರಿರುತ್ತದೆ. ಎಂಬುದನ್ನು ಅರಿತಿದ್ದಾರೆ ಎಂಬುದನ್ನು ತಿಳಿದು ಬಹಳ ಖುಷಿಯಾಯಿತು.

"ಯಶಸ್ಸು ಎನ್ನುವುದು ಸಾಧಕನ ಸೊತ್ತೇ ಹೊರತು ಸೋಮಾರಿಯ ಸೋತ್ತಲ್ಲ" ಎಂಬ ವ್ಯಾಖ್ಯಾನವನ್ನು ನಿರೂಪಿಸಿರುವ ಶ್ರೀ. ಪಿ.ಜಿ.ಆರ್. ಸಿಂಧ್ಯರವರಿಗೆ ಅಭಿನಂದನೆಗಳು.

**ಎಂ. ಡಿ. ಸೌಂದರ್ಯ,** 9ನೇ ತರಗತಿ
ಎಸ್.ಡಿ.ವಿ.ಎಸ್. ವಿದ್ಯಾ ಸಂಸ್ಥೆ, ಯಳಂದೂರು

# ಶ್ರದ್ಧಾಂಜಲಿ

## ದಿನಾಂಕ 27-02-2016ನೇ ಶನಿವಾರ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ರಾಜ್ಯ ಆಯುಕ್ತೆ (ಗೈಡ್ಸ್) ಆಗಿದ್ದ ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್ ಅವರ ಪತಿ ಶ್ರೀ **ಹೆಚ್. ಎಸ್. ರೇಣುಕಾಪ್ರಸಾದ್** ರವರು ದಿನಾಂಕ 27-02-2016ನೇ ಶನಿವಾರದಂದು ತಮ್ಮ 88ನೇ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ ನಿಧನ ಹೊಂದಿದರು. ಇವರು ಹಿರಿಯ ವಕೀಲರು, ಭಾರತ್ ಸ್ಕೌಟ್ಸ್-ಗೈಡ್ಸ್ ರಾಜ್ಯಸಂಸ್ಥೆಯ ಆಜೀವ ಸದಸ್ಯರು, ಕರ್ನಾಟಕ ರೋಟರಿ ಸಂಘದ ಅಧ್ಯಕ್ಷರು, ಬಸವ ಸಮಿತಿ ಅಧ್ಯಕ್ಷರು, ಕರ್ನಾಟಕ ರಾಜ್ಯ ವೀರಶೈವ ಸಂಘದ ಅಧ್ಯಕ್ಷರು, ಅಖಿಲ ಭಾರತ ವೀರಶೈವ ಮಹಾಸಭೆ ಉಪಾಧ್ಯಕ್ಷರಾಗಿ ಹಾಗೂ ಇತರ ಸಮಾಜ ಕ್ಷೇತ್ರಗಳಲ್ಲಿ ಕಾರ್ಯನಿರ್ವಹಿಸಿದ್ದರು. ಇವರು ಪತ್ನಿ, ಮೂವರು ಮಕ್ಕಳು ಹಾಗೂ ಅಪಾರ ಬಂಧು-ಮಿತ್ರರನ್ನು ಅಗಲಿದ್ದಾರೆ.

ಶ್ರೀಯುತರ ನಿಧನದಿಂದ ಆಗಿರುವ ದುಃಖವನ್ನು ಭರಿಸಲು ಅವರ ಕುಟುಂಬದವರಿಗೆ ಶಕ್ತಿ ಹಾಗೂ ಅವರ ಆತ್ಮಕ್ಕೆ ಚಿರಶಾಂತಿ ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ




ದಿ 01 ರಿಂದ 5 ಮಾರ್ಚ್ 2016ರ ವರೆಗೆ ಬೆಂಗಳೂರಿನ ಶಾಂತಿಗೃಹದಲ್ಲಿ ನಡೆದ "ಹ್ಯಾಮ್‌ರೇಡಿಯೋ" ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದ ರೋವರ್ ಮತ್ತು ರೇಂಜರ್‌ಗಳೊಂದಿಗೆ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಮುಖ್ಯ ಆಯುಕ್ತರು, ಶ್ರೀ ರಾಮಮೋಹನ್, ಸಂಪನ್ಮೂಲ ವ್ಯಕ್ತಿಗಳು ಹಾಗೂ ಇತರ ಪದಾಧಿಕಾರಿಗಳನ್ನು ಚಿತ್ರದಲ್ಲಿ ಕಾಣಬಹುದು.



ದಿ. 12 ಮತ್ತು 13 ಮಾರ್ಚ್ 2016 ರಂದು ಚಿಕ್ಕಬಳ್ಳಾಪುರ ಜಿಲ್ಲೆಯ ರೋವರ್ ಮತ್ತು ರೇಂಜರ್‌ಗಳಿಗಾಗಿ ಹಮ್ಮಿಕೊಳ್ಳಲಾಗಿದ್ದ ಪುನಶ್ಚೇತನ ಕಾರ್ಯಗಾರವನ್ನು ಗೌರಿಬಿದನೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಶ್ರೀ ಎಂ. ಶಿವಣ್ಣ ಅವರು ಉದ್ಘಾಟಿಸುತ್ತಿರುವುದು. ಶ್ರೀ ಜಿ.ವಿ. ರಾಮಲತ, ಸಹಾಯಕ ರಾಜ್ಯ ಆಯುಕ್ತರು(ಗೈಡ್) ಹಾಗೂ ಇತರರರನ್ನು ಚಿತ್ರದಲ್ಲಿ ಕಾಣಬಹುದು.



ಶಿವಮೊಗ್ಗದಲ್ಲಿ ನಡೆದ ಜಿಲ್ಲಾ ಮಟ್ಟದ ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಪ್ರಶಸ್ತಿ ಪ್ರಧಾನ ಮಾಡಿದ ಶ್ರೀ ವಿ.ಪಿ. ಇಕ್ಕೇರಿ, ಭಾ.ಆ.ಸೇ, ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಸಂಸ್ಥೆ ಅಧ್ಯಕ್ಷರು ಅವರೊಂದಿಗೆ ಕಬ್ಸ್-ಬುಲ್‌ಬುಲ್ಸ್, ಸ್ಕೌಟ್ಸ್-ಗೈಡ್ಸ್ ಮತ್ತು ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.



ಕೊಡಗು ಜಿಲ್ಲೆಯ ಕಕ್ಕಬ್ಬೆಯಲ್ಲಿ ಹಮ್ಮಿಕೊಳ್ಳಲಾಗಿದ್ದ ರಾಜ್ಯ ಮಟ್ಟದ ಪರಿಸರ ಅಧ್ಯಯನ ಮತ್ತು ಚಾರಣ ಶಿಬಿರದಲ್ಲಿ ಚಾರಣ ಕೈಗೊಂಡಿರುವ ರೋವರ್ ಮತ್ತು ರೇಂಜರ್‌ಗಳು.



ತುಮಕೂರಿನಲ್ಲಿ ಹಮ್ಮಿಕೊಳ್ಳಲಾಗಿದ್ದ ಜಿಲ್ಲಾ ಮೇಳದಲ್ಲಿ ಸಾಹಸಮಯ ಚಟುವಟಿಕೆಯಲ್ಲಿ ಭಾಗವಹಿಸುತ್ತಿರುವ ಸ್ಕೌಟ್ಸ್-ಗೈಡ್ಸ್‌ಗಳು.



ದಿ. 22-02-2016 ರಂದು ಹೆಚ್.ಎ.ಎಲ್‌ನಲ್ಲಿ "ವಾಲ್‌ಚಂದ್ ಹೀರಾಚಂದ್ ಮುಕ್ತ ಸ್ಕೌಟ್ ದಳ"ವನ್ನು ಉದ್ಘಾಟಿಸಿದ, ಹೆಚ್.ಎ.ಎಲ್ ಕುಟುಂಬ ಕ್ಷೇಮಾಭಿವೃದ್ಧಿ ಸಂಘದ ಪೋಷಕರಾದ ಡಾ॥ ರಮಣೀರಾವ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಟಿ.ಎಸ್. ಲೂಕಾಸ್ ಅವರೊಂದಿಗೆ ಸ್ಕೌಟ್ಸ್-ಗೈಡ್ಸ್‌ಗಳು.

Regd. as News Paper (Magazine) RNI No : 13348/1959. Postal Regd. No. KA/BGGPO/2580/2015-17
Permitted to Post under WPP System Vide No.: WPP-340
Posted at: Bengaluru PSO, Mysore Road, Bengaluru-26 on 28 & 30 every Month (No. of Pages : 04+32 = 36)

ರಾಮನಗರ ಜಿಲ್ಲೆಯ ಜಾನಪದ ಲೋಕದಲ್ಲಿ ಹಮ್ಮಿಕೊಳ್ಳಲಾಗಿದ್ದ ರಾಜ್ಯ ಮಟ್ಟದ ಕಬ್ಸ-ಬುಲ್‌ಬುಲ್ ಉತ್ಸವದಲ್ಲಿ ಆಯೋಜಿಸಲಾಗಿದ್ದ ವಿವಿಧ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸುತ್ತಿರುವ ಕಬ್ಸ್-ಬುಲ್‌ಬುಲ್ಸ್‌ಗಳ ವಿಹಂಗಮ ನೋಟ
















If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
Shanthi Gruha, #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26